

ಕನ್ನಡ ವಿಶ್ವವಿದ್ಯಾಲಯ, ಹಂಪಿ,

# ಕೊಡಗಿನ ಗೌರಮ್ಮನವರ ಕಥೆಗಳು - ಸ್ತ್ರೀಅಸ್ಮಿತೆಯ ಹುಡುಕಾಟ

ಕನ್ನಡ ಎಂ.ಫಿಲ್ ಪದವಿಗಾಗಿ ಕಾವ್ಯಮಂಡಲದ
ವತಿಯಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಅರ್ಪಿಸಿದ ನಿಬಂಧ



ಕಾವ್ಯಮಂಡಲ
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು - ೫೬೦ ೦೦೪

೨೦೦೯

ರಿಜಿಸ್ಟರ್ ನಂಬರ್. KVM BKS/00340

# ಪರಿವಿಡಿ





794

## ಅಧ್ಯಾಯ - ೧

## ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ನವೋದಯ ತಾನು ಕಟ್ಟಿಕೊಂಡ ಪರಂಪರೆಯ ಪರಿಕಲ್ಪನೆಯನ್ನು ಆಧುನೀಕರಣದೊಂದಿಗೆ ಮುಖಾಮುಖಿಯನ್ನಾಗಿಸಿದ ಬಹುಮುಖ್ಯ ಕಾಲಘಟ್ಟ. ಆಂಗ್ಲರ ಆಧುನಿಕ ವಿಚಾರಗಳು, ಅವರ ವೈಚಾರಿಕತೆ ವಿಮರ್ಶಾದೃಷ್ಟಿಕೋನಗಳನ್ನು ತನ್ನ ಪರಂಪರೆಯ ಚೌಕಟ್ಟಿನಲ್ಲಿ ನಿಂತು ಅರ್ಥೈಸಿಕೊಳ್ಳಲು ತೊಡಗಿದ ಕಾಲ. ಹಾಗಾಗಿ ರವೀಂದ್ರನಾಥ ಠಾಗೂರರಿಗೆ 'ಪ್ರಾಚೀನ ಸಾಹಿತ್ಯ'ದಂತಹ, ಕುವೆಂಪುರವರಿಗೆ 'ಸರೋವರದ ಸಿರಿಗನ್ನಡಿಯಲ್ಲಿ' ಎಂಬ ವಿಮರ್ಶಾ ಪುಸ್ತಕಗಳನ್ನು ಹೊರತರಲು ಸಾಧ್ಯವಾಯಿತು. ಕಾವ್ಯ ರಸಾನುಭೂತಿಯ ನೆಲೆಯಿಂದ ಜೀವನಾನುಭವಗಳ ಹುಡುಕಾಟದ ನೆಲೆಗೆ ಅವಸ್ಥಾಂತರಗೊಳ್ಳಲು ಪ್ರಾರಂಭಿಸಿತು. ಈ ಕಾಲಘಟ್ಟದಲ್ಲಿ ವಿಚಾರವಂತ ಮನಸ್ಸುಗಳು ತಮ್ಮ ಯೋಚನಾಲಹರಿಗಳೊಂದಿಗೆ ಸಾಮಾಜಿಕ, ರಾಜಕೀಯ, ಧಾರ್ಮಿಕ ಚೌಕಟ್ಟಿನೊಳಗೆ ಪ್ರವೇಶಿಸಿ ಆಧುನಿಕ ತಲ್ಲಣಗಳನ್ನು ಹೊರಜಗತ್ತಿಗೆ ತೆರೆದಿಡಲು ಮುನ್ನುಗ್ಗಿತು. ಇದುವರೆಗಿನ ತನ್ನ ಚರಿತ್ರೆಯ ಹುಡುಕಾಟಕ್ಕೆ ತೊಡಗಿಕೊಳ್ಳುವ ತಹತಹ ಒಂದು ಕಡೆಯಾದರೆ, ರಾಷ್ಟ್ರೀಯ ಐಕ್ಯತೆಗಾಗಿ ತುಡಿಯುವ ದೇಶಾಭಿಮಾನದ ವಿಚಾರಗಳು ಮತ್ತೊಂದು ಕಡೆ. ಇಂತಹ ಸಂದರ್ಭದಲ್ಲಿ ಎಷ್ಟೋ ಮಹಿಳೆಯರು ಸ್ವಾತಂತ್ರ್ಯ ಚಳವಳಿಗಳಲ್ಲಿ, ಪತ್ರಿಕಾ ಕ್ಷೇತ್ರಗಳಲ್ಲಿ ಸಾಹಿತ್ಯ ವಲಯದಲ್ಲಿ ಕಂಡು ಬಂದರು. ಪೂರಕ ರೀತಿಯಲ್ಲಿ ಸ್ತ್ರೀಜಗತ್ತು ಹೊರಹೊಮ್ಮಿದ್ದರಿಂದ ಪ್ರಾರಂಭದಲ್ಲಿ ಪ್ರಧಾನವಾಹಿನಿಯೂ ಅದನ್ನು ಧಿಕ್ಕರಿಸಲಿಲ್ಲ.

ಸುಧಾರಣಾವಾದಿ ಪ್ರಜ್ಞೆಯಿಂದಲೋ ಅಥವಾ ಉದಾರವಾದಿ ಮನೋಧರ್ಮದಿಂದಲೋ ಒಟ್ಟಿನಲ್ಲಿ ಹೆಣ್ಣಿಗೆ ಸಿಕ್ಕ ಶಿಕ್ಷಣದ ಅವಕಾಶ ಆಕೆಗೆ ತನ್ನ ಸುತ್ತಲಿನ ಸಂಕೋಲೆಗಳನ್ನು ಅರಿಯಲು, ಪ್ರಶ್ನಿಸಲು ಸಹಕರಿಸಿತು. ಅಧೀನ ನೆಲೆಯಲ್ಲಿ ದುಡಿಮೆಯ ಕ್ಷೇತ್ರಕ್ಕೆ ಹೆಣ್ಣನ್ನು ಸೀಮಿತಗೊಳಿಸಲು ಹವಣಿಸಿದ ಪ್ರಧಾನವಾಹಿನಿ ಅವಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ತುಳಿಯಲು ಯತ್ನಿಸಿತು. ಮಾಸ್ತಿಯಂತಹವರು ಇಂತಹ ಮುಖ್ಯವಾಹಿನಿಯ ಪ್ರಮುಖರಾಗಿದ್ದರು ಎಂಬ ಕಟು ವಾಸ್ತವ ಅವರು ತಿರುಮಲಾಂಬರವರ 'ಸತೀಹಿತೈಷಿಣಿ' ಗ್ರಂಥಮಾಲೆಗೆ ಬರೆದ ಮುನ್ನುಡಿಯಲ್ಲಿ ಕಾಣಬಹುದು.

ಹೆಣ್ಣನ್ನು ದೇವತೆಯಾಗಿಯೋ, ಅಧೀನಳಾಗಿಯೋ ಅತಿವಾಸ್ತವ ನೆಲೆಯಲ್ಲಿ ಕಲ್ಪಿಸಿಕೊಳ್ಳಲು ಸಾಧ್ಯವಿರುವ ಪುರುಷ ಜಗತ್ತಿಗೆ ತನ್ನ ಸರಿಸಮಾನವಾಗಿ ಕಾಣಲು ಸಾಧ್ಯವಾಗದಿರುವುದೇ ಅದರ ಪೂರ್ವಾಗ್ರಹ ಪೀಡಿತ ಮನಸ್ಸನ್ನು ಅನಾವರಣ ಮಾಡುತ್ತದೆ. ಅಕ್ಷರಲೋಕಕ್ಕೆ ತೆರೆದುಕೊಂಡ ಮೊದಲ

ತಲೆಮಾರಿನ ಲೇಖಕಿಯರಿಗೆ ಅರಿವಾದ ಸಮಾನತೆಯ ತತ್ತ್ವ ತಲೆತಲಾಂತರದಿಂದ ಶಿಕ್ಷಣವನ್ನು ಪಡೆಯುತ್ತಿರುವ ಜ್ಞಾನದ ಹಕ್ಕುದಾರರೆಂದೇ ಭಾವಿಸಿಕೊಂಡಿರುವ ಪುರುಷಜಗತ್ತಿಗೆ ಹೇಗೆ ಸಾಧ್ಯವಾಗಲಿಲ್ಲ? ಅನ್ಯರನ್ನು ದಮನಕ್ಕೊಳಪಡಿಸಿ ಮೇಧಾವಿಯಂತೆ ನಟಿಸುವ ಪ್ರಧಾನವಾಹಿನಿಗೆ ತನ್ನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿಕೊಳ್ಳುವ ಧೈರ್ಯವಾಗಲೀ, ಹೆಣ್ಣನ್ನು ವಾಸ್ತವವಾಗಿ ಅರ್ಥಮಾಡಿಕೊಳ್ಳುವ, ಕಲ್ಪಿಸಿಕೊಳ್ಳುವ ಶಕ್ತತೆಯಾಗಲಿ ಇಲ್ಲದಿರುವುದು ಕಂಡುಬರುತ್ತದೆ. ಜೀವನಾನುಭವಗಳ ಅಭಿವ್ಯಕ್ತಿಗೆ ತೊಡಗಿಕೊಂಡ ಮಹಿಳೆಯರನ್ನು ಅನುಮಾನದಿಂದ ಕಂಡ ವ್ಯವಸ್ಥೆ ಟೀಕಿಸದೇ ಬಿಡಲಿಲ್ಲ. ಇಷ್ಟೆಲ್ಲ ಸಂಕೀರ್ಣತೆಗಳ ನಡುವೆಯೂ ಹೆಣ್ಣು ತನ್ನ ಮನಸ್ಸಿನ ನೋವು–ನಲಿವುಗಳಿಗೆ ದನಿ ಕೊಟ್ಟದ್ದು ನವೋದಯದ ಮಹತ್ತ್ವ ಸಂಗತಿಯಾಗಿದೆ.

ತಿರುಮಲಾಂಬ, ಆರ್. ಕಲ್ಯಾಣಮ್ಮನವರಿಂದ ಮೊದಲುಗೊಂಡ ನವೋದಯ ಮಹಿಳಾ ಸಾಹಿತ್ಯವು ಶ್ಯಾಮಲ ಬೆಳಗಾಂವಕರ, ಸರಸ್ವತಿ ರಾಜವಾಡೆ, ಬೆಳಗೆರೆ ಜಾನಕಮ್ಮ, ವಾಸಂತಿಬಾಯಿ ಪಡುಕೋಣೆ, ಲೀಲಾಕಾರಂತ, ಜಯದೇವಿ ತಾಯಿ ಲಿಗಾಡೆ, ತಿರುಮಲೆ ರಾಜಮ್ಮ, ಕೊಡಗಿನ ಗೌರಮ್ಮ, ಹೆಚ್.ವಿ. ಸಾವಿತ್ರಮ್ಮ, ಶಾಂತಾದೇವಿ ಮಾಳವಾಡರವರೆಗೆ ಚಾಚಿಕೊಂಡಿತ್ತು. ಹೆಣ್ಣು ಕೌಟುಂಬಿಕ ಚೌಕಟ್ಟಿನೊಳಗೆ ಚಿಂತಿಸುವ ಕೂಪಮಂಡೂಕ ಬುದ್ಧಿಯವಳು ಎಂಬ ಸಂಕುಚಿತ ಮನೋಭಾವವನ್ನು ಧಿಕ್ಕರಿಸುವ ಅನುಭವ ತೀವ್ರತೆಯಿಂದ ಇವರುಗಳ ಸಾಹಿತ್ಯ ಕೂಡಿದೆ.

ನವೋದಯದ ಕೊಡಗಿನ ಗೌರಮ್ಮನವರು ಶ್ರೇಣೀಕರಿಸಿ ವ್ಯವಸ್ಥೆಯನ್ನು ಮೀರಿ ನಿಂತು ಜೀವನಾನುಭವಗಳಿಗೆ ಕಥಾರೂಪ ನೀಡಿದ ದಿಟ್ಟ ಮಹಿಳೆ. ಆಧುನಿಕ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಳ್ಳುವುದಾದರೆ ಗೌರಮ್ಮನವರನ್ನು ಯಾವ ಸ್ಥಾನದಲ್ಲಿರಿಸಬೇಕೆಂಬ ಸವಾಲು ಎದುರಾಗುತ್ತದೆ. ಏಕೆಂದರೆ ಪ್ರಜ್ಞಾಪೂರ್ವಕವಾಗಿ ಸ್ತ್ರೀವಾದದ ನಿಲುವಿನಿಂದ ಸಾಹಿತ್ಯರಚನೆಗೆ ತೊಡಗಿಕೊಂಡ ನವ್ಯದ ವೀಣಾಶಾಂತೇಶ್ವರರಿಂದ ಭಿನ್ನರಾಗುವ ಇವರು ಪರಂಪರೆಯ ಚೌಕಟ್ಟಿನಲ್ಲಿದ್ದು ಹೆಣ್ಣಿನ ಸಮಸ್ಯೆಗಳನ್ನು ಗ್ರಹಿಸಿ, ಪ್ರಶ್ನೆ ಮಾಡಿದವರು. ಮನೋವಿಶ್ಲೇಷಣಾತ್ಮಕ ನೆಲೆಯಲ್ಲಿ ನಿಲ್ಲುವ ವೈದೇಹಿ, ತ್ರಿವೇಣಿಯವರಂತೆ ಕಂಡರೂ ಹೆಣ್ಣಿನ ಸಮಸ್ಯೆಗಳ ಸಾಮಾಜಿಕ ಜವಾಬ್ದಾರಿಯನ್ನು ಎತ್ತಿಹಿಡಿದಿದ್ದಾರೆ. ಪ್ರಧಾನವಾಹಿನಿ ಮಾತ್ರ ಎದುರಿಸಬಲ್ಲ ಸವಾಲೆಂಬ ಗ್ರಹಿಕೆಯಿದ್ದ ಮತಾಂತರವನ್ನು ಕಥಾವಸ್ತುವನ್ನಾಗಿ ಸ್ವೀಕರಿಸಿ ಅದು ಬದುಕಿಗಿಂತ ದೊಡ್ಡದಲ್ಲವೆಂಬ ತಾತ್ವಿಕ ನಿಲುವಿಗೆ ಗೌರಮ್ಮ ತಲುಪುತ್ತಾರೆ. ಅಷ್ಟೇ ಅಲ್ಲ ಕನ್ನಡದ ಶ್ರೇಷ್ಠ ಲೇಖಕರು ಗಂಭೀರವಾಗಿ ಪರಿಗಣಿಸದಿದ್ದ ಹೆಣ್ಣಿನ ಜ್ವಲಂತ ಸಮಸ್ಯೆಯಾದ ವಿವಾಹ, ವರದಕ್ಷಿಣೆಗಳನ್ನು ತಮ್ಮ ಕಥೆಗಳ ವಸ್ತುವನ್ನಾಗಿಸಿಕೊಳ್ಳುವ ಮೂಲಕ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ನೈತಿಕ

## ೨. ನವೋದಯ ಮಹಿಳಾ ಸಾಹಿತ್ಯ ಪ್ರವೇಶ

ನವೋದಯದ ಸುಧಾರಣವಾದಿ, ಉದಾರವಾದಿ ಧೋರಣೆಯ ಹಿನ್ನೆಲೆಯಿಂದ ಶಿಕ್ಷಣಕ್ಷೇತ್ರವನ್ನು ಪ್ರವೇಶಿಸಿದ ಮೊದಲ ತಲೆಮಾರಿನ ಲೇಖಕಿಯರು ತಮ್ಮ ಸುತ್ತಲ ಸಂಕೋಲೆಗಳನ್ನು ಅರ್ಥೈಸಿಕೊಳ್ಳಲು, ಪ್ರಶ್ನಿಸಲು ಪ್ರಾರಂಭಿಸಿದರು. ಪುರುಷ ಜಗತ್ತು ಚಿತ್ರಿಸಿ ಕೊಟ್ಟಿರುವ ಆದರ್ಶದ, ಅತಿವಾಸ್ತವದ ಹೆಣ್ಣಿನ ಪರಿಕಲ್ಪನೆಯಿಂದ ಹೊರಬರಬೇಕಾದ ಅನಿವಾರ್ಯತೆಯನ್ನು ಮನಗಂಡು ತಮ್ಮ ಜೀವನಾನುಭವಗಳನ್ನು ಅಭಿವ್ಯಕ್ತಿಸಲು ಆರಂಭಿಸಿದರು. ಹೆಣ್ಣಿನ ಈ ಸ್ವತಂತ್ರ ಚಿಂತನಾಲಹರಿಗಳ ಅಪಾಯವನ್ನು ಮನಗಂಡ ಪ್ರಧಾನವಾಹಿನಿ ಟೀಕೆ, ಮಾರ್ಗದರ್ಶನದ ಹೆಸರಿನಲ್ಲಿ ಇದನ್ನು ದಮನ ಮಾಡಲು ಪ್ರಯತ್ನಿಸಿತು. ಮಾಸ್ತಿಯವರು ತಿರುಮಲಾಂಬರವರ 'ಸತೀಹಿತೈಷಿಣಿ' ಗ್ರಂಥಮಾಲೆಗೆ ಬರೆದ ಮುನ್ನುಡಿಯೂ ಇದೇ ನಿಲುವಿನಿಂದ ಹೊರಟದ್ದಾಗಿತ್ತು. ಆದರೆ ಇದಾವುದಕ್ಕೂ ಎದೆಗುಂದದೆ ಅಡುಗೆಮನೆಯಿಂದ ಹೊರಬಂದು ವಿಚಾರಪ್ರಪಂಚಕ್ಕೆ ತಮ್ಮನ್ನು ತೊಡಗಿಸಿಕೊಂಡ ದಿಟ್ಟ ನವೋದಯ ಮಹಿಳೆಯರು ವ್ಯವಸ್ಥೆಗೆ ನೀಡಿದ ಪೆಟ್ಟು ಬಹುಮುಖ್ಯವಾದುದು.

"ಸ್ತ್ರೀಯರು ಮೇಲಿನ ಕ್ರಿಯೆಗೆ ಅನರ್ಹರೆಂದೂ, ಸ್ತ್ರೀಯರಿಂದ ಇಂತಹ ಗ್ರಂಥಗಳು ಎಂದಿಗೂ ಬರೆಯಲ್ಪಡಲಾರವೆಂದೂ, ಆರೋ ಸುಶಿಕ್ಷಿತರಾದ ಪುರುಷರೇ ಇದನ್ನು ಹೀಗೆ ಸ್ತ್ರೀಕರ್ತೃತ್ವದಲ್ಲಿ ಹೊರಡುವಂತೆ ಗುಪ್ತವಾಗಿದ್ದು ಪ್ರಚರಿಸುತ್ತಿರುವರೆಂದೂ, ಇನ್ನೂ ಹಲವು ಸಂದೇಹಗಳಿಂದ ಹುಚ್ಚ ಹುರಳಾಗಿ ಹೇಳುತ್ತಿದ್ದಾರೆ. ನಮ್ಮ ಸಮಾಧಾನವಿಷ್ಟೆ: ಸಂಶಯ ರೋಗಕ್ಕೆ ಚಿಕಿತ್ಸೆಯಿಲ್ಲ. ಪ್ರಯತ್ನ ಮತ್ತು ಅಭ್ಯಾಸಗಳಿಗೆ ಅಸಾಧ್ಯವಾದ ಕೆಲಸಗಳು ಪ್ರಾಯಶಃ ಇರಲಾರವು. ಪುರುಷನಿಗೆ ಇರುವಷ್ಟು ಮೇಧಾಶಕ್ತಿ ಪ್ರತಿಭಾ ಸಂಪನ್ನತೆಗಳು ಸ್ತ್ರೀಯರಲ್ಲಿಯೂ ಸ್ವಾಭಾವಿಕ ಗುಣಗಳಾಗಿದ್ದು, ಕೆಲವು ಸಂದರ್ಭಗಳಲ್ಲಿ ಅಧಿಕತರವಾಗಿಯೇ ಕೌಶಲದಂತೆ ಹೊರಹೊಮ್ಮುವುದೂ ಉಂಟು ಎಂದು ಹೇಳಿ ಮಹಿಳಾ ಸಾಹಿತ್ಯಕ್ಕೆ ನಾಂದಿ ಇಟ್ಟ ಶ್ರೀಮತಿ ತಿರುಮಲಾಂಬ ಸಮರ್ಥವಾಗಿಯೇ ಇಂಥ ಆಕ್ಷೇಪಗಳನ್ನು ತಳ್ಳಿ ಹಾಕಿದರು."[೧] ಎಂದು ಜಿ.ಎಸ್. ಅಮೂರರು ತಮ್ಮ 'ಅವಳ ಕತೆಗಳು' ಕೃತಿಯ ಪ್ರಸ್ತಾವನೆಯಲ್ಲಿ ತಿರುಮಲಾಂಬರವರ ಮಾತುಗಳನ್ನು ದಾಖಲಿಸಿದ್ದಾರೆ.

ನವೋದಯ ಸಾಹಿತ್ಯದ ಮತ್ತೊಂದು ಮಹತ್ವದ ಸಂಗತಿಯೆಂದರೆ ಅಕ್ಷರಲೋಕವನ್ನು ಪ್ರವೇಶ ಮಾಡಿದ ಬಹಳ ಮಂದಿ ಮಹಿಳೆಯರು ಹೆಣ್ಣಿನ ಸಮಸ್ಯೆಗಳನ್ನು, ನೋವು ನಲಿವುಗಳನ್ನು ಸ್ತ್ರೀನೆಲೆಯಲ್ಲಿ

ನಿಂತು ಗ್ರಹಿಸಲು, ಅಭಿವ್ಯಕ್ತಿಸಲು ಪ್ರಾರಂಭಿಸಿದರು. ಇದನ್ನು ಕುರಿತು ಎಸ್. ಗಾಯಿತ್ರಿಯವರು ತಮ್ಮ 'ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ಮತ್ತು ಸ್ತ್ರೀ' ಎಂಬ ಲೇಖನದಲ್ಲಿ ಚಿಂತಿಸಿದ್ದಾರೆ.

> "ವರ್ಣ, ವರ್ಗ, ಲಿಂಗಾಧಾರಿತ ಭಾರತೀಯ ಶ್ರೇಣೀಕೃತ ಸಮಾಜವು ವಸಾಹತುಶಾಹಿಯ ಸಂಪರ್ಕಕ್ಕೆ ಬಂದಾಗ ಒಂದು ರೀತಿಯ ಶಾಕ್ ಟ್ರೀಟ್‌ಮೆಂಟ್‌ಗೆ ಒಳಗಾಗಿ ತನ್ನ ಜಡತ್ವವನ್ನು ಕೊಡವಿಕೊಂಡು ಮೇಲೆದ್ದಿತು. ಇದರಿಂದಾಗಿ ಪರಂಪರಾಗತವಾಗಿ ಬಂದಿದ್ದ ಸಾಂಪ್ರದಾಯಿಕ ಊಳಿಗಮಾನ್ಯ ಮೌಲ್ಯಗಳ ವಿಘಟನೆ ಆರಂಭವಾಯಿತು. ಒಂದು ರೀತಿಯ  ಹೊಸ ಎಚ್ಚರ, ಮಾನವತಾವಾದದ ಅಲೆಯೊಂದು ಉದ್ಭವಿಸಿ ಜೀವನಪರ ದೃಷ್ಟಿ ಬೆಳೆಯಿತು. ಆಧ್ಯಾತ್ಮಕ್ಕಿದ್ದ ಒತ್ತು ಕಡಿಮೆಯಾಯಿತು. ಸ್ತ್ರೀಯರನ್ನು ಕುರಿತ ಸ್ತ್ರೀ ಸುಧಾರಣಾ ಚಳವಳಿಗಳು ಹುಟ್ಟಿಕೊಂಡವು. ಈ ಚಳವಳಿಯ ಪ್ರಭಾವದಿಂದಾಗಿ ಸಾಹಿತ್ಯದಲ್ಲಿಯೂ ಸ್ತ್ರೀಯರನ್ನು ಕುರಿತಾದ ಸಾಂಪ್ರದಾಯಿಕ ಮೌಲ್ಯವನ್ನು ಪ್ರಶ್ನಿಸುವ ಯತ್ನ ನಡೆಯಿತು."[2]

ನವೋದಯದ ಮೊದಲ ತಲೆಮಾರಿನ ಲೇಖಕರುಗಳಾದ ಗುಲ್ವಾಡಿ ವೆಂಕಟರಾಯರು, ಬೋಳುವಾರ ಬಾಬುರಾವ್ ಹಾಗೂ ಎಂ.ಎಸ್. ಪುಟ್ಟಣ್ಣನವರು ನಮ್ಮ ಸಮಾಜದಲ್ಲಿನ ಹಳೆಯ ಶ್ರದ್ಧೆಗಳಾದ ಬಾಲ್ಯವಿವಾಹ, ಕೇಶಮುಂಡನ, ಸಮುದ್ರಯಾನ, ಅಸ್ಪೃಶ್ಯತೆ, ಬಹುಪತ್ನಿತ್ವಗಳನ್ನು ತಮ್ಮ ಕಥಾವಸ್ತುಗಳನ್ನಾಗಿ ಆಯ್ದುಕೊಂಡಂತೆ ಆಧುನಿಕ ಶಿಕ್ಷಣದ ಪ್ರಭಾವಕ್ಕೊಳಗಾಗಿ ಸ್ತ್ರೀಶಿಕ್ಷಣ, ವಿಧವಾವಿವಾಹಗಳನ್ನು ತಮ್ಮ ಕಥಾವಸ್ತುವನ್ನಾಗಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ ಇವೆರಡು ವಿಚಾರಗಳನ್ನು ಚರ್ಚೆಗೊಳಪಡಿಸಿದ್ದಾರೆ.

> "ಬಾಲವಿಧವೆಯೊಬ್ಬಳ ವೈಧವ್ಯದ ಬವಣೆಗಳನ್ನು, ಆಕೆಯ ಮರುವಿವಾಹವನ್ನು ಚಿತ್ರಿಸುವ ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ'ಯಲ್ಲಿ ಸುಶಿಕ್ಷಿತ ಮಹಿಳೆಯು ತನ್ನ ವ್ಯಕ್ತಿತ್ವವಿಕಾಸದಿಂದ ತನ್ನ ಪರಿಸರದಲ್ಲಿ ಹೇಗೆ ಮಾದರಿ ವ್ಯಕ್ತಿಯಾಗಬಲ್ಲಳು ಎಂಬುದನ್ನು ಸೂಚಿಸುತ್ತದೆ. ಹಾಗೆಯೇ ಇದಕ್ಕೆ ವಿರುದ್ಧವಾಗಿ ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಕೃತಿಯಲ್ಲಿ ಮುಖ್ಯ ಪಾತ್ರವಾದ ಇಂದಿರೆಯು ವಿದ್ಯಾವಂತಳೂ, ಸುಶಿಕ್ಷಿತಳೂ ಆದರೂ ಅವಳನ್ನು ಪರಂಪರಾಗತ ಹಿಂದೂಧರ್ಮದ ಉನ್ನತ ಆದರ್ಶಗಳ ಪ್ರತೀಕವಾಗಿ ಚಿತ್ರಿಸಿ, ಹಿಂದೂ ಧರ್ಮದಲ್ಲಿಯೇ ಕ್ರಾಂತಿಕಾರಕ ಬದಲಾವಣೆಗಳನ್ನು ನಿರಾಕರಿಸುವ ಪ್ರಯತ್ನವೂ ಕಂಡುಬರುತ್ತದೆ. ಹೀಗೆ ವಸಾಹತೀಕರಣದ ಪ್ರಭಾವಕ್ಕೆ, ಇಂಗ್ಲಿಷ್ ಶಿಕ್ಷಣದ ಲಾಭಕ್ಕೆ ತೆರೆದುಕೊಂಡ ಮಹಿಳೆಯರ ಸ್ಥಿತಿಗತಿಗಳನ್ನು ಆಪ್ತವಾಗಿ ಚಿತ್ರಿಸಿದ ಮೊದಲ ಹಂತದ ಈ ಕಾದಂಬರಿಗಳು ಮುಂದಿನ

ನವೋದಯದ ಸಾಹಿತ್ಯ ಸಂದರ್ಭದಲ್ಲಿ ಹೆಣ್ಣನ್ನು ಹೆಚ್ಚು ಮಾನವೀಯವಾಗಿ ನೋಡಬೇಕಾದ ಪ್ರಯತ್ನಕ್ಕೆ ಅರ್ಥಪೂರ್ಣ ಭೂಮಿಕೆಯನ್ನು ಒದಗಿಸಿದವು."[೬]

ಎಂದು ಎನ್. ಗಾಯಿತ್ರಿಯವರು ಅಭಿಪ್ರಾಯಪಡುತ್ತಾರೆ. ನವೋದಯದ ಎಲ್ಲ ಲೇಖಕರು ಮಾನವೀಯತೆ, ಉದಾರ ಭಾವಗಳನ್ನು ತಮ್ಮ ಸಾಹಿತ್ಯದ ಭೂಮಿಕೆಯಾಗಿಸಿಕೊಂಡಿದ್ದು ಕಂಡುಬರುತ್ತದೆ.

ಕುವೆಂಪು, ಮಾಸ್ತಿ, ಬೇಂದ್ರೆ, ಕಾರಂತರು ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದಂತಹ ಕಾಲದಲ್ಲೇ ತಿರುಮಲಾಂಬ, ಆರ್. ಕಲ್ಯಾಣಮ್ಮ, ಬೆಳಗೆರೆ ಜಾನಕಮ್ಮ, ಶ್ಯಾಮಲ ಬೆಳಗಾಂವಕರ, ಕೊಡಗಿನ ಗೌರಮ್ಮ, ಸರಸ್ವತಿ ರಾಜವಾಡೆ ಮುಂತಾದವರು ಸಾಹಿತ್ಯ ರಚನೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಅಷ್ಟೇ ಅಲ್ಲ ಆರ್. ಕಲ್ಯಾಣಮ್ಮ, ತಿರುಮಲಾಂಬರಂಥವರು ಪತ್ರಿಕೆ ಹಾಗೂ ಸಂಘಸಂಸ್ಥೆಗಳನ್ನು ಸ್ಥಾಪಿಸಿ ಸಮಾಜದ ಏಳಿಗೆಗೆ ಶ್ರಮಿಸಿದರು. ಯಾವುದೇ ಮಹಿಳಾ ಚಳವಳಿಗಳು ಇಲ್ಲದೇ ಇದ್ದಂತಹ ನವೋದಯ ಕಾಲದಲ್ಲಿ ಸಂಘಟನಾತ್ಮಕ ಕಾರ್ಯಗಳಲ್ಲಿ ಮಹಿಳೆಯರು ತೊಡಗಿಕೊಂಡದ್ದು ಅವರ ಸಾಮರ್ಥ್ಯವನ್ನು, ಸಾಮಾಜಿಕ ಕಾಳಜಿಯ ಬಗ್ಗೆ ಅವರಿಗಿರುವ ಅರಿವನ್ನು, ನಮಗೆ ಮನದಟ್ಟು ಮಾಡಿಕೊಡುತ್ತದೆ. ಇಂತಹ ಮಹಿಳಾಲೇಖಕಿಯರ ಬಗ್ಗೆ ನಡೆದಿರುವ ಅಧ್ಯಯನಗಳು, ಬಂದಿರುವ ವಿಮರ್ಶೆಗಳು ಬೆರಳೆಣಿಕೆಯಷ್ಟು ಎಂಬ ವಿಚಾರವೆ ಸಮಾಜವು ಮಹಿಳಾ ಸಾಹಿತ್ಯಕ್ಕೆ ನೀಡಿರುವ ಪ್ರಾಮುಖ್ಯತೆಯನ್ನು ನಮಗರಿವಾಗಿಸುತ್ತದೆ. ಇದಕ್ಕೆ ಸಾಕ್ಷಿಯೆಂಬಂತೆ ಇರುವ ಎಲ್. ಎಸ್. ಶೇಷಗಿರಿರಾಯರ ವಿಚಾರವನ್ನು ಸಬೀಹ ಭೂಮಿಗೌಡರವರು ತಮ್ಮ ಲೇಖನವಾದ "ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ಪರಿಗಣನೆ" ಎಂಬುದರಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

" 'ಎರಡು ದಶಕಗಳಲ್ಲಿ ನೂರು ಜನ ಲೇಖಕಿಯರು ಬಂದಿದ್ದಾರೆ. ಇವರ ಕೊಡುಗೆ ಗಮನಾರ್ಹ. ಆದರೆ ವಿಶೇಷವಿಲ್ಲ' (ಶೇಷಗಿರಿರಾವ್ ಎಲ್.ಎಸ್. ೧೯೭೫ : ೧೯೦) ಎಂಬ ಒಂದು ಸಾಲಿನ ವಿಮರ್ಶೆಯ ಮೂಲಕ ಒಟ್ಟು ಮಹಿಳಾ ಸಾಹಿತ್ಯವನ್ನು ಅಂಚಿಗೆ ತಳ್ಳಲಾಗಿದೆ"[೭] ಎಂಬ ಸತ್ಯವನ್ನು ಸಬೀಹರವರು ಶೇಷಗಿರಿರಾಯರ ಮಾತುಗಳಿಂದ ಕಂಡುಕೊಂಡರು.

ಪಿತೃಪ್ರಧಾನ ವ್ಯವಸ್ಥೆ ಕಟ್ಟಿಕೊಂಡ ತಾತ್ವಿಕ ದೃಷ್ಟಿಕೋನ ಕೇವಲ ನವೋದಯ ಲೇಖಕಿಯರನ್ನಷ್ಟೇ ಅವಜ್ಞೆಗೊಳಪಡಿಸಿಲ್ಲ, ಅದಕ್ಕೂ ಹಿಂದಿನ ಲೇಖಕಿಯರನ್ನು ಅದು ಕಂಡಿದ್ದು ಲಿಂಗರಾಜಕಾರಣದ ಮಾದರಿಯಲ್ಲೇ ಎಂಬುದನ್ನು ಸಾಬೀತುಪಡಿಸುವ ಮಾತುಗಳನ್ನು ನಾವಿಲ್ಲಿ ಕಾಣಬಹುದು.

“ ‘ಹದಿಬದೆಯ ಧರ್ಮ’ ವೆಂಬ ನೀತಿ ಕಾವ್ಯ ಬರೆದದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸೋಜಿಗವೇ ಸರಿ (ಮುಗಳಿ ರಂ ಶ್ರೀ ೧೯೯೮ : ೩೧೨) ಹೀಗೆ ವಿಸ್ಮಯವನ್ನು ವ್ಯಕ್ತಪಡಿಸಿದ್ದಾರೆ.”[೫] ಎಂಬ ಕಹಿಸತ್ಯವನ್ನು ಸಬೀಹ ಭೂಮಿಗೌಡರವರು ತಮ್ಮ ‘ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯದ ಪರಿಗಣನೆ’ ಎಂಬ ಲೇಖನದಲ್ಲಿ ಗುರುತಿಸಿದ್ದಾರೆ.

ಎಲ್.ಎಸ್. ಶೇಷಗಿರಿರಾಯರು ಹಾಗೂ ರಂ.ಶ್ರೀ. ಮುಗಳಿ ಇವರುಗಳ ದೃಷ್ಟಿಕೋನದ ಹಿಂದೆ ಕೆಲಸ ಮಾಡುತ್ತಿರುವ ಪ್ರಜ್ಞೆ ಪುರುಷ ನಿರ್ಮಿತ ಸಾಹಿತ್ಯರೂಪಗಳನ್ನೇ ಮಹಿಳೆಯರಲ್ಲೂ ನಿರೀಕ್ಷಿಸುತ್ತಿದೆಯೇ ಹೊರತು, ಇದುವರೆಗೂ ಸಮಾಜವು ಹೇರಿರುವ ಸಂಪ್ರದಾಯದ ಕಟ್ಟಳೆಗಳಿಂದ ಹೊರಬಂದು ತಮ್ಮ ನೋವುಗಳಿಗೆ ದನಿ ನೀಡುತ್ತಿರುವ ಮಹಿಳಾ ಸಾಹಿತ್ಯದ ಆಂತರ್ಯವನ್ನು ಅಲ್ಲ.ಅವರು ಬಹುಶಃ ಅವರುಗಳು ತಮ್ಮ ಮನಸ್ಸುಗಳನ್ನು ಪುರುಷಕೇಂದ್ರಿತ ಸ್ತ್ರೀಸಂಕಥನಗಳಿಂದ ಹೊರಬಂದಂತೆ ಪ್ರಜ್ಞಾಪೂರ್ವಕವಾಗಿ ನಿರ್ಬಂಧಿಸಲ್ಪಟ್ಟಿರುವುದೆ ಇದರ ಬಹುಮುಖ್ಯ ಕಾರಣವಾಗಿದೆ.

ನವೋದಯದ ಲೇಖಕಿಯರು ಸಮಾಜದ ಪ್ರಮುಖ ಸಮಸ್ಯೆಗಳಾಗಿದ್ದ ಬಾಲ್ಯವಿವಾಹ, ವರದಕ್ಷಿಣೆ, ವೇಶ್ಯಾಸಮಸ್ಯೆ, ಸ್ತ್ರೀಶಿಕ್ಷಣ, ವಿಧವಾವಿವಾಹಗಳನ್ನೇ ತಮ್ಮ ಸಾಹಿತ್ಯದ ವಸ್ತುಗಳನ್ನಾಗಿಸಿಕೊಂಡರೂ, ನಿರೂಪಣಾ ವಿಧಾನ ಹಾಗೂ ಕಥನ ತಂತ್ರಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಮೊದಲ ಲೇಖಕಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ತಿರುಮಲಾಂಬರವರು ಕಥೆ ಹಾಗೂ ಕಾದಂಬರಿ ಕ್ಷೇತ್ರಗಳನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಿಕೊಂಡರು. ಇವರ ಸಾಹಿತ್ಯವು ಪ್ರತಿಭಟನೆ, ವಿಡಂಬನೆಗಳಿಗಿಂತ ಹೆಚ್ಚಾಗಿ ಸಾತ್ವಿಕ ಮನೋಭಾವದ ಅನುಸಂಧಾನದ ಕಡೆಗೆ ತುಡಿಯುವುದನ್ನು ಕಾಣಬಹುದು. ಇವರ ಸಮಕಾಲೀನರೆ ಆದ ಆರ್. ಕಲ್ಯಾಣಮ್ಮನವರಲ್ಲೂ ಸಹ ಸಮಾಜದ ಅನಿಷ್ಟಗಳಿಗೆ ಒಳಗಾಗಿರುವ ಜನರ ಮನಸ್ಸು ವಿಕಸನಗೊಳ್ಳಬೇಕು, ಹೃದಯ ವೈಶಾಲ್ಯಗೊಳ್ಳಬೇಕು ಎಂಬ ಮನೋಭಾವವಿದೆ. ಕೆಳಗಿನ ಮಾತುಗಳು ಇದಕ್ಕೆ ನಿದರ್ಶನವನ್ನೊದಗಿಸುತ್ತದೆ.

“ಸ್ತ್ರೀಯು ವಿವೇಕರಹಿತಳಾಗಿ ಪುರುಷನ ಅಧೀನದಲ್ಲಿ ಬಿದ್ದಿದ್ದು ಅವನ ಮನೋವಿನೋದ ಪಡಿಸಿ, ಅವನಿಗೆ ಆಭರಣದಂತಿರಬೇಕೆಂದು ಅವಳು ಸೃಷ್ಟಿಸಲ್ಪಡಲಿಲ್ಲ. ಈಕೆಯು ತನಗೂ ಮತ್ತು ಇತರರಿಗೂ ಸೌಖ್ಯವನ್ನುಂಟುಮಾಡುವುದಕ್ಕೆ ಮತ್ತು ಅವಳು ತನ್ನ ಜೀವಿತಕಾಲದಲ್ಲಿ ನಡೆಸಬೇಕಾದ ಅನೇಕ ಉತ್ತರವಾದಿ ಕಾರ್ಯಗಳನ್ನು ವಿರಚಿಸಿ, ಇತರರನ್ನು ಸನ್ಮಾರ್ಗದಲ್ಲಿ

ನಡೆಯುವಂತೆ ಅವರನ್ನು ಶಿಕ್ಷಿಸಿ ದಯಾರ್ದ್ರಮಾನಸರಾಗುವಂತೆ ಮಾಡುವುದಕ್ಕಾಗಿಯೇ ಸ್ತ್ರೀಯು ಸೃಷ್ಟಿಸಲ್ಪಟ್ಟಿದ್ದಾಳೆ. ಹಾಗಲ್ಲದೆ ತಾನು ಮಾತ್ರ ಶೃಂಗರಿಸಿಕೊಂಡು ಹೊಟ್ಟೆಯನ್ನು ತುಂಬಿಸಿಕೊಂಡು ಕಾಲ ಕಳೆಯುತ್ತಿರಬೇಕೆಂಬ ಉದ್ದೇಶಕ್ಕಾಗಿರುವುದಿಲ್ಲ."[೬]

ಹೀಗೆ ನವೋದಯದ ಆರ್. ಕಲ್ಯಾಣಮ್ಮನವರು ಚಿಂತಿಸುವುದರ ಹಿಂದೆ ಮಾನವತಾವಾದಕ್ಕೆ ಅವರು ನೀಡಿರುವ ಪ್ರಾಮುಖ್ಯತೆ ತಿಳಿದುಬರುತ್ತದೆ.

ಇವರುಗಳಿಗಿಂತ ಭಿನ್ನವಾಗಿ ಹೆಣ್ಣಿನ ಸಮಸ್ಯೆಗಳನ್ನು ಗ್ರಹಿಸಿದ ಕೊಡಗಿನ ಗೌರಮ್ಮ, ಶ್ಯಾಮಲ ಬೆಳಗಾಂವಕರ ಹಾಗೂ ಬೆಳಗೆರೆ ಜಾನಕಮ್ಮನವರು ತಮ್ಮ ಸಾಹಿತ್ಯದಲ್ಲಿ ಸಮಾಜದ ಅನಿಷ್ಟಗಳಿಗೆ ಮೂಲವಾಗಿರುವ ಸಮಾಜಿಕ, ಆರ್ಥಿಕ, ಧಾರ್ಮಿಕ ಕಾರಣಗಳತ್ತ ಗಮನ ಹರಿಸುತ್ತಾರೆ. ಸಮಾಜದ ಹಲವು ಸಮಸ್ಯೆಗಳಿಗೆ ಸಿಲುಕಿರುವ ಮಹಿಳೆಯರನ್ನೇ ತಮ್ಮ ಕಥಾಸಾಹಿತ್ಯದ ಕೇಂದ್ರವಾಗಿರಿಸಿಕೊಂಡಿರುವ ಗೌರಮ್ಮನವರು 'ಪುನರ್ವಿವಾಹ', 'ಅಪರಾಧಿ ಯಾರು?', 'ಅವಳ ಭಾಗ್ಯ' ಎಂಬಂತಹ ಕಥೆಗಳಲ್ಲಿ ಸ್ತ್ರೀಯ ವಿಭಿನ್ನ ನೆಲೆಗಳನ್ನು ಕಂಡುಕೊಳ್ಳಲು ಹವಣಿಸಿದ್ದಾರೆ. ಅದೇ ರೀತಿ ಶ್ಯಾಮಲ ಬೆಳಗಾಂವಕರರು ವೇಶ್ಯಾ ಸಮಸ್ಯೆಗೆ ಹಾಗೂ ಹೆಣ್ಣಿನ ಇತರ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿದ್ದಾರೆ. ಹೇಗೆ ಕುಟುಂಬ ವ್ಯವಸ್ಥೆಯೇ 'ವೇಶ್ಯಾ ಸಮಸ್ಯೆ'ಯನ್ನು ಬೆಳೆಸಿ, ಪೋಷಿಸುತ್ತಿದೆಯೆಂಬ ಕ್ರೌರ್ಯವನ್ನು 'ಕರುಳ ಕತ್ತರಿ' ಎಂಬ ಕಥೆ ಅನಾವರಣ ಮಾಡುತ್ತದೆ.

ತಂದೆತಾಯಿಗಳ ಒತ್ತಾಯಕ್ಕೆ ಮಣಿದು ವೇಶ್ಯೆಯಾಗಿ ರೂಪುಗೊಂಡ ಚಂದ್ರಮ್ಮ ಮುಂದೆ ಅವರುಗಳ ನೀಚತನಕ್ಕೆ ಹೇಸಿ ಊರಿಂದ ದೂರ ಬಂದು ಒಬ್ಬ ರಾಯನ ಆಶ್ರಯದಲ್ಲಿ ಜೀವನ ಸಾಗಿಸುತ್ತಿರುತ್ತಾಳೆ. ಸಾಕಷ್ಟು ಹಣವಂತೆಯಾದ ಈಕೆಯ ಸುದ್ದಿ ತಿಳಿಯುತ್ತಲೇ ತಂದೆ ಬಣಗಾರ ಗದಿಗೆಪ್ಪ ಬಂದು ನಾಜೂಕಾಗಿ ಮಾತಾಡಿ ತನ್ನ ಊರಿಗೆ ಕರೆದೊಯ್ದು ಅವಳಿಗೆ ಬುದ್ಧಿಭ್ರಮಣೆಯಾಗುವಂತಹ ಮದ್ದು ನೀಡಿ ಅವಳ ಸಂಪತ್ತನ್ನೆಲ್ಲ ಮೋಸದಿಂದ ತನ್ನದಾಗಿಸಿಕೊಳ್ಳುತ್ತಾನೆ. ಹೀಗೆ ರಕ್ಷಕರೇ ಭಕ್ಷಕರಾಗಿ ಹೆಣ್ಣನ್ನು ಶೋಷಣೆಗೆ ಗುರಿಮಾಡುತ್ತಿರುವುದರ ಸಮಾಜದ ಅವಿತ ಮುಖವನ್ನು ಶ್ಯಾಮಲ ಬೆಳಗಾಂವಕರರ ತಮ್ಮ 'ಕರುಳ ಕತ್ತರಿ' ಎಂಬ ಕಥೆಯಲ್ಲಿ ಬಯಲಿಗೆಳೆದಿದ್ದಾರೆ. ಅವರ ಮತ್ತೊಂದು ಕಥೆಯಾದ 'ಸವತಿಯರು' ಎಂಬುದು ಹೇಗೆ ಪುರುಷಪ್ರಧಾನ ವ್ಯವಸ್ಥೆ ಹೆಣ್ಣನ್ನು 'ಮಾತೃತ್ವ'ದ ಕೇಂದ್ರದೊಳಗೆ ಬಂಧಿಸುತ್ತದೆ ಎಂಬುದರ ವಿಡಂಬನೆಯಿದೆ. ಈ ಕಥೆಯ ಕಥಾನಾಯಕ ಕೃಷ್ಣರಾಯ ಮೊದಲ ಹೆಂಡತಿಯಿರುವಾಗಲೇ ಸಂತಾನಕ್ಕಾಗಿ ಮತ್ತೊಬ್ಬಳನ್ನು ಮದುವೆಯಾಗುತ್ತಾನೆ. ಪುರುಷಪ್ರಧಾನ

ವ್ಯವಸ್ಥೆಯಲ್ಲಿ ಹೆಣ್ಣೆಂದರೆ "Children Manufacturing Company" ಎಂಬ ಕಹಿ ವಾಸ್ತವವನ್ನು ಬಯಲಿಗೆಳೆದಿದ್ದಾರೆ. ಇಲ್ಲೆಲ್ಲ ಪುರುಷ ಸಂಕಥನಗಳ ಪಾವಿತ್ರ್ಯವನ್ನು ಪ್ರಶ್ನೆ ಮಾಡುವ ದಿಟ್ಟತನವನ್ನು ಶ್ಯಾಮಲ ಬೆಳಗಾಂವಕರರು ತೋರಿದ್ದಾರೆ.

ಬೆಳಗೆರೆ ಜಾನಕಮ್ಮನವರು ಕಾವ್ಯವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಿಕೊಂಡವರು. ಅವರ 'ಗಂಡ' ಎಂಬ ಕವನ ಇಡೀ ಪುರುಷ ಕೇಂದ್ರೀಕೃತ ವ್ಯವಸ್ಥೆಯ ಕ್ರೌರ್ಯವನ್ನು ಬಯಲಿಗೆಳೆಯುವಂತೆ ಇದೆ.

"ಗಂಡನ ಮನೆ ಸಗ್ಗ ನಿನಗೆ– ಮುನಿಯೆ ಗಂಡನೆ
ಯಮರಾಯ ಕೊನೆಗೆ
ನಿನ್ನ ಮುಳುಗಿಪ ತೇಲಿಪ ಶಕ್ತಿಯುಂಟಾತಗೆ
ನೀನೊಂದು ವಿಕ್ರಯದೊಸ್ತುವು ಪುರುಷಗೆ"[೭]

ಎನ್ನುವ ಜಾನಕಮ್ಮನವರು ಹೆಣ್ಣಿನ ಮನದೊಂದಿಗೆ ಆಪ್ತವಾಗಿ ಸಂವಾದ ನಡೆಸಬಲ್ಲಾಕೆ. ಹೆಣ್ಣಿನ ಅಸಹಾಯಕತೆಯ ಬಗ್ಗೆ ವಿಷಾದವಿದ್ದರೂ ಪುರುಷಕೇಂದ್ರಿತ ವ್ಯವಸ್ಥೆಯ ಬಗ್ಗೆ ವ್ಯಂಗ್ಯವೂ ಇದೆ. ಏಕೆಂದರೆ ಅದು ಹೆಣ್ಣನ್ನು ಒಂದು ಜೀವಿಯೆಂದು ಗೌರವಿಸದೆ ವಸ್ತುವಿನಂತೆ ದುಡಿಮೆಯ ಕೇಂದ್ರಕ್ಕಳವಡಿಸಿ ಅರ್ಥೈಸಿಕೊಳ್ಳುತ್ತಿದೆ.

ಜಾನಕಮ್ಮನವರ 'ಚಂಡಶಾಸನ' ಕವನ ಸ್ತ್ರೀಸಂವೇದನೆಯ ದೃಷ್ಟಿಯಿಂದ ಬಹುಮುಖ್ಯವಾದದ್ದು. ಹೆಣ್ಣಿನ 'ಮಾತೃತ್ವ'ದ ಪಾವಿತ್ರ್ಯ ಕಲ್ಪನೆಯನ್ನು ಪ್ರಶ್ನಿಸುವ ಈ ಕವನ ಹೆಣ್ಣಿನ ಅಸ್ಮಿತೆಯ ಹುಡುಕಾಟಕ್ಕೆ ತೊಡಗಿದೆ.

"ಕಸಕ್ಕಿಂತ ಕಡೆಯಾಯ್ತೆ
ಹೆಣ್ಣು ಜನ್ಮವು ನಿನಗೆ
ಈ ಭಾರ ಹೊರಿಸುವುದಕೆ
ಲಂಚಕೋರನು ನೀನು
ವಂಚನೆಯ ಮಾಡಿರುವೆ
ಮೃದುತನದ ಸ್ತ್ರೀವರ್ಗಕೆ
ಗಿಡವೆಂದು ಬಗೆದೆಯೋ
ಹೆಣ್ಣು ಜನ್ಮದ ಒಡಲ
ಫಲಗಳು ಸೃಜಿಸುವುದಕೆ"[೮]

ಸೃಷ್ಟಿಯ ಕ್ರಿಯೆಗೆ ಸೀಮಿತಗೊಳಿಸಿ ಹೆಣ್ಣನ್ನು ಅತಿವಾಸ್ತವದ ಆದರ್ಶದ ನೆಲೆಯಲ್ಲಿ ಚಿತ್ರಿಸುವ ಪ್ರಧಾನವಾಹಿನಿಯನ್ನು ಪ್ರಶ್ನಿಸುವ ದಿಟ್ಟತನವನ್ನು ಜಾನಕಮ್ಮನವರು ಈ 'ಚಂಡಶಾಸನ' ಕವನದಲ್ಲಿ ಮಾಡಿದ್ದಾರೆ.

ನವೋದಯದ ಮಹತ್ತ್ವದ ಲೇಖಕಿಯರ ಸಾಲಿಗೆ ಸೇರುವ ಗಿರಿಬಾಲೆ ಕಾವ್ಯನಾಮದಿಂದ ಪ್ರಸಿದ್ಧರಾದ ಸರಸ್ವತಿ ರಾಜವಾಡೆಯವರು ಹೆಣ್ಣಿನ ಶೋಷಣೆಗೆ ಕಾರಣವಾಗಿರುವ ಸಮಾಜದ ನೈತಿಕತೆಯನ್ನು ತಮ್ಮ ಕಥೆಗಳಲ್ಲಿ ಪ್ರಶ್ನೆಗೊಡ್ಡಿದ್ದಾರೆ. ಅವರ 'ಅವಳ ಉದ್ಧಾರ' ಎಂಬ ಕಥೆ ಇದಕ್ಕೆ ಪ್ರಾತಿನಿಧಿಕದಂತಿದೆ. ಸಂಬಂಧಿಕನಿಂದ ಅತ್ಯಾಚಾರಕ್ಕೊಳಗಾಗಿ ಮನೆಯಿಂದ ಹೊರಬಂದು ವಿಧವಾಶ್ರಮ ಸೇರಿದ ಆಕೆ ಮಗುವನ್ನು ಹಡೆದ ನಂತರ ಶ್ರೀಮಂತ ವಿಧುರನೊಬ್ಬನಿಗೆ ಆಶ್ರಮದ ವ್ಯವಸ್ಥಾಪಕನೊಬ್ಬನಿಂದ ಮಾರಲ್ಪಡುತ್ತಾಳೆ. ಮುಂದೆ ಆ ಕಟುಕನಿಂದಲೂ ಬಿಡುಗಡೆ ಹೊಂದಿ ದಲ್ಲಾಳಿ ಕೈಗೆ ಸಿಗುವ ಮೂಲಕ ವೇಶ್ಯಾವೃತ್ತಿಗೆ ಹೊರಡುತ್ತಾಳೆ. ಕಥೆಯ ಕೊನೆಯಲ್ಲಿ "ವಿಧವಾಶ್ರಮದಿಂದ ಆದುದು ಇದೇ ಏನು? ಅವಳ ಉದ್ಧಾರ!" ಎಂಬ ಪ್ರಶ್ನೆಯನ್ನು ಲೇಖಕಿ ಎತ್ತುತ್ತಾಳೆ. ಇದು ವ್ಯವಸ್ಥೆಯ ದಾರುಣ ಚಿತ್ರವನ್ನು ನಮಗೆ ನೀಡುತ್ತದೆ.

ವಾಸಂತಿಬಾಯಿ ಪಡುಕೋಣೆಯವರು 'ವರದಕ್ಷಿಣೆ', 'ಸಂಶಯ ಪಿಶಾಚಿ', 'ತ್ಯಾಗವೋ ಒಪ್ಪಿಗೆಯೋ' ಎಂಬಂತಹ ಸಾಮಾಜಿಕ ಸಮಸ್ಯೆಗಳನ್ನು ವಸ್ತುವಾಗುಳ್ಳ ಕಥೆಗಳನ್ನು ರಚಿಸಿದ್ದಾರೆ.

ಲೀಲಾ ಕಾರಂತ ಸಹ ಸಾಹಿತ್ಯರಚನೆ ಕೈಗೊಂಡಿದ್ದರು. ಆದರೆ ಅವರು ಬರೆದದ್ದು ಕಡಿಮೆ. 'ನಾ ಕಂಡ ಕಾರಂತ' ಎಂಬ ಲೇಖನ ಬರೆದಿದ್ದಾರೆ. ಅದನ್ನು ಬಿಟ್ಟರೆ ಕಾರಂತರೊಡಗೂಡಿ ಹರಿನಾರಾಯಣ ಆಪ್ಟೆಯವರ "ಯಾರು ಲಕ್ಷಿಸುವವರು?" ಎಂಬ ಬೃಹತ್ ಕಾದಂಬರಿಯನ್ನು ಮರಾಠಿಯಿಂದ ಕನ್ನಡಕ್ಕೆ ತಂದರು. ಇದೊಂದು ಯಮುನಾಬಾಯಿ ಎಂಬ ವಿಧವೆಯ ಕಥೆ.

ನವೋದಯದ ಪ್ರಮುಖ ಶರಣ ಸಾಹಿತಿ ಜಯದೇವಿ ತಾಯಿ ಲಿಗಾಡೆಯವರು. ಈಕೆ ನಾಡು-ನುಡಿಗೆ ಸಂಬಂಧಪಟ್ಟ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. 'ಜಯಗೀತ', 'ತಾಯಿಯ ಪದಗಳು' ಹಾಗೂ 'ಸಿದ್ಧರಾಮ ಪುರಾಣ' ಇವರ ಪ್ರಮುಖ ಕೃತಿಗಳು. ಇವರ ಸಮಕಾಲೀನರೇ ಆದ ಬೆಳಗಾವಿಯ ಶಾಂತದೇವಿ ಮಾಳವಾಡರವರು ಕಥಾಸಾಹಿತ್ಯದ ರಚನೆಯಲ್ಲಿ ತೊಡಗಿಸಿಕೊಂಡಾಕೆ. ಇವರು 'ರಂಜಿನಿ' ಎಂಬ ಕಥೆಯಲ್ಲಿ ಮತಾಂತರದಂತಹ ವಿಚಾರವನ್ನು ಕಥಾವಸ್ತುವಾಗಿ ಆರಿಸಿಕೊಂಡಿದ್ದಾರೆ. ಪರಂಪರಾಗತ

ಮೌಲ್ಯಗಳನ್ನು ಪ್ರಶ್ನಿಸುವ ಎಚ್.ವಿ. ಸಾವಿತ್ರಮ್ಮನವರು ಮುಂದೆ 'ಸೀತೆ-ರಾಮ-ರಾವಣ' ದಂತಹ ಮಹತ್ವದ ಕಾದಂಬರಿಯನ್ನು ರಚಿಸಿದರು.

ನವೋದಯ ಲೇಖಕಿಯರು ಅಕ್ಷರ ಜ್ಞಾನದ ಬೆಳಕಿಗೆ ಒಳಪಡುವ ಮೂಲಕ ಸ್ತ್ರೀಯನ್ನು ಕತ್ತಲೆ ಜಗತ್ತಿಗೆ ದೂಡಿದ ಪುರುಷನಿರ್ಮಿತ ಸಂಕಥನಗಳಾದ ಮಾತೃತ್ವ, ಪತ್ನಿತ್ವಗಳನ್ನು, ಸಮಾಜದ ಅವಹೇಳನಕ್ಕೆ ಗುರಿಯಾಗಿದ್ದ ವೇಶ್ಯೆಯರ ಸಮಸ್ಯೆಗಳನ್ನು ತಮ್ಮ ಸಾಹಿತ್ಯದಲ್ಲಿ ವಿವೇಚನೆಗೆ ಒಳಪಡಿಸುವ ಮೂಲಕ ಈ ಸಮಸ್ಯೆಗಳಿಗೆ ಕಾರಣಗಳು ನಿರ್ದಿಷ್ಟವಾಗಿ ಒಂದೇ ನೆಲೆಗೆ ಸೀಮಿತವಾಗದೆ ಸಮಾಜದ ಎಲ್ಲಾ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ನೈತಿಕ ಕ್ಷೇತ್ರಗಳಿಗೆ ಸಂಬಂಧಿಸಿರುವುದನ್ನು ಕಂಡುಕೊಂಡರು. ಇದರಿಂದಾಗಿ ಅವರಿಗೆ ತಮ್ಮ ಸಾಹಿತ್ಯದಲ್ಲಿ ಹೊಸ ಒಳನೋಟಗಳು ಸಾಧ್ಯವಾಯಿತು.

## ಅಡಿಟಿಪ್ಪಣಿ

೧. 'ಅವಳ ಕತೆಗಳು' – ಸಂ. ಜಿ.ಎಸ್. ಆಮೂರ. ಪ್ರಸ್ತಾವನೆ, ಪುಟ – ೧

೨. ಕನ್ನಡ ಸಾಹಿತ್ಯ ಪುನರ್‌ಮೌಲೀಕರಣ ಮಾಲೆ – 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ' ಪುಟ–೭೬

೩. ಕನ್ನಡ ಸಾಹಿತ್ಯ ಪುನರ್‌ಮೌಲೀಕರಣ ಮಾಲೆ – 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ' ಪುಟ–೭೮

೪. 'ಮಹಿಳಾ ಅಧ್ಯಯನ' – ಸಂಪುಟ ೪, ಸಂಚಿಕೆ ೨, ಜನವರಿ ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೬೯

೫. 'ಮಹಿಳಾ ಅಧ್ಯಯನ' – ಸಂಪುಟ ೪, ಸಂಚಿಕೆ ೨, ಜನವರಿ ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೬೯

೬. ಕರ್ನಾಟಕ ಸಾಹಿತ್ಯ ಅಕಾಡೆಮಿ, 'ಸಾಹಿತ್ಯ ವಿಮರ್ಶೆ – ೧೯೮೮', ಪುಟ–೮೬

೭. ಕನ್ನಡ ಸಾಹಿತ್ಯ ಪುನರ್‌ಮೌಲೀಕರಣ ಮಾಲೆ – 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ'

ಪುಟ–೧೦೨

೮. 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' – ಸಂ. ಎಚ್.ಎಸ್. ಶ್ರೀಮತಿ, ಪ್ರಸಾರಾಂಗ, ಹಂಪಿ, ಪುಟ–೨೭೧

# ಅಧ್ಯಾಯ – ೨

## ೨. ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಸ್ತ್ರೀವಾದದ ಹೊಳಹುಗಳು

ಸ್ತ್ರೀವಾದವು ಸಮಾನತೆಯನ್ನು ಹಾಗೂ ಲಿಂಗರಾಜಕಾರಣದ ಪ್ರತಿರೋಧದ ಮಾದರಿಗಳನ್ನು ತನ್ನ ಗುರಿಯನ್ನಾಗಿಸಿಕೊಂಡಿದೆ. ಸ್ತ್ರೀ ಚಟುವಟಿಕೆಗಳು ಮಹಿಳೆಯರ ಹಕ್ಕೊತ್ತಾಯಕ್ಕಾಗಿ, ಬದುಕುವ ಆರೋಗ್ಯಯುತ ವಾತಾವರಣಕ್ಕಾಗಿ ಪ್ರಾಶಸ್ತ್ಯ ನೀಡಿದರೆ, ಸಾಹಿತ್ಯ ಕ್ಷೇತ್ರದಲ್ಲಿ ಕಾಣಿಸಿಕೊಂಡ ಸ್ತ್ರೀವಾದವು ಇದುವರೆಗಿನ ಪ್ರಧಾನವಾಹಿನಿಯ ಬರಹವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಮರುಅಧ್ಯಯನಕ್ಕೆ ಒಳಪಡಿಸಲು ಹಾಗೂ ಸ್ತ್ರೀ ಬರಹದ ಪರಂಪರೆಯನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿತು. 'ಹೆಣ್ಣು ಸ್ತ್ರೀಯಾಗಿ ಹುಟ್ಟುವುದಿಲ್ಲ. ಸಮಾಜ ಅವಳನ್ನು ಸ್ತ್ರೀಯಾಗಿ ರೂಪಿಸುತ್ತದೆ' ಎಂಬ ಸಿಮೋನ್ ದ ಬೋವಾ ಚಿಂತನೆಯನ್ನು ಮನಗಂಡ ಎಷ್ಟೋ ವಿಚಾರವಂತ ಮಹಿಳೆಯರು ತಮ್ಮ ಸುತ್ತಲಿನ ಆದರ್ಶದ ಕೋಟೆಗಳನ್ನು ಕುರಿತು ಚಿಂತಿಸಲು ಆರಂಭಿಸಿದರು. ಇದರ ಪರಿಣಾಮವೆಂಬಂತೆ ಸ್ತ್ರೀವಾದ ರೂಪು ತಳೆಯಿತು. ಸ್ತ್ರೀವಾದದ ಬಗ್ಗೆ ಚಿಂತಿಸುತ್ತಾ ಕನ್ನಡದ ಮಹತ್ತ್ವದ ಚಿಂತಕಿ ವಿಜಯಾದಬ್ಬೆಯವರು ತಮ್ಮ 'ಆಶಯ ಲೇಖನ' ದಲ್ಲಿ ಹೀಗೆ ಹೇಳುತ್ತಾರೆ.

"ಪೂರ್ವನಿರ್ಧಾರಿತ ಲಿಂಗಜಾತಿಯನ್ನು ಆಧರಿಸಿ ಸ್ತ್ರೀಯನ್ನು ಕುರಿತು ಹಲವು ಆದಿಮ ಪ್ರತಿಮೆಗಳು ಸಂಸ್ಕೃತಿಯಲ್ಲಿದ್ದು ವ್ಯಕ್ತಿಯು ಸಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ಅವುಗಳನ್ನು ಅಂತರ್ಗತವಾಗಿಸಿಕೊಳ್ಳುವುದರ ಪರಿಣಾಮವಾಗಿ ಸಾಂಪ್ರದಾಯಿಕ ಲಿಂಗಜಾತಿ ಸ್ವರೂಪವು ನಮ್ಮ ಪ್ರಜ್ಞೆಯಲ್ಲಿ ತಳವೂರಿರುತ್ತದೆ. ಈ ಪ್ರತಿಮೆ, ಸಂಕೇತಗಳನ್ನು ಪ್ರಶ್ನಿಸುವುದು, ಬದಲಿಸುವುದು, ಒಡೆಯುವುದು ಸ್ತ್ರೀವಾದಿ ಪ್ರಜ್ಞೆಯ ಒಂದು ಅಗತ್ಯವಾಗಿದೆ. ಸ್ತ್ರೀಯನ್ನು ವೈಭವೀಕರಿಸಲಿ. ಅವಳ ಶಕ್ತಿಯನ್ನು ನಿರಾಕರಿಸಲಿ ಅಂತಿಮ ಪರಿಣಾಮವಾಗಿ ಅವಳನ್ನು ಅವಳಿರುವಂತೆಯೇ ಗುರುತಿಸಲು ಸಾಧ್ಯವಾಗದಂತೆ ಈ ಪ್ರತಿಮೆಗಳು ತಡೆಯುತ್ತವೆ. ಈ ಶ್ಲಾಘನೆ, ನಿಂದನೆಗಳ ಗೋಡೆಗಳನ್ನು ಒಡೆದು ನಿಜವಾದ ಮಹಿಳೆಯನ್ನು ಉಸಿರಾಡಬಿಡುವುದು ಈ ದಿಕ್ಕಿನ ಒಂದು ಅಗತ್ಯವಾಗಿದೆ."[೧]

ಜೀವಶಾಸ್ತ್ರೀಯ ಹೆಣ್ಣುತನ ಹಾಗೂ ಸಾಂಸ್ಕೃತಿಕವಾಗಿ ಹೇರಲ್ಪಟ್ಟ ಹೆಣ್ಣುತನಗಳ ನಡುವಿನ ವ್ಯತ್ಯಾಸವನ್ನು ಕಂಡುಕೊಂಡ ಮಹಿಳೆ ಸಾಮಾನ್ಯ ಜೈವಿಕ ಕ್ರಿಯೆಯಿಂದ ಗರ್ಭಧಾರಣೆ, ಹೆರಿಗೆಗಳನ್ನು ಮಾತೃತ್ವದ ಪರಿಕಲ್ಪನೆಯೆಂದು ಆದರ್ಶೀಕರಿಸುವುದನ್ನು ವಿರೋಧಿಸಿದಳು. 'ಮಾತೃತ್ವ'ದ ತತ್ತ್ವವನ್ನೇ ಕೇಂದ್ರವಾಗುಳ್ಳ ಮಹಾಶ್ವೇತದೇವಿಯರ 'ಸ್ತನದಾಯಿನಿ' ಕಥೆ ಇದರ ವಿಕಾರರೂಪದ ಪರಿಚಯ

ಮಾಡಿಕೊಡುತ್ತದೆ. ಈ ಕಥೆಯಲ್ಲಿ ಬರುವ ತಾಯಿ ಯಶೋಧೆ ಬಡತನದ ಕಾರಣದಿಂದಾಗಿ ಗಂಡ ಮಕ್ಕಳನ್ನು ಕಾಪಾಡಲು ಹಾಲೂಡುವ ತನ್ನ ಸ್ತನಗಳನ್ನೇ ದುಡಿಮೆಯ ಸಾಧನವನ್ನಾಗಿಸಿಕೊಳ್ಳುತ್ತಾಳೆ. ಇದಕ್ಕಾಗಿ ನಿರಂತರವಾಗಿ ಮಕ್ಕಳನ್ನು ಹೆರುವ ಕ್ರಿಯೆಗೆ ಒಳಗುಮಾಡಿಕೊಂಡು ಶ್ರೀಮಂತರ ಮಕ್ಕಳಿಗೆ ಹಾಲುಡಿಸಿ ಜೀವನ ನಡೆಸುತ್ತಿರುತ್ತಾಳೆ. ಇಂತಹ ಯಶೋಧೆಯ ಸ್ತನಗಳಿಗೆ ಕ್ಯಾನ್ಸರ್ ಬಡಿದಾಗ ಹೆತ್ತ ಮಕ್ಕಳಾಗಲೀ, ಸಾಕಿದ ಮಕ್ಕಳಾಗಲೀ ಯಾರೂ ನೆರವಿಗೆ ಬರುವುದಿಲ್ಲ. ಹೆಣ್ಣಿನ ಈ ಸ್ಥಿತಿಯೇ ಮಾತೃತ್ವದ ಆದರ್ಶವನ್ನು ಪ್ರಶ್ನೆ ಮಾಡುತ್ತದೆ.

ಸಮಾಜ 'ಮಾತೃತ್ವ' ದಂತೆಯೇ ಹೆಣ್ಣನ್ನು 'ದೇವಿ'ಯ ರೂಪದಲ್ಲಿ ಕಾಣುತ್ತಿರುವುದು ಒಂದು ಸಂಪ್ರದಾಯವಾಗಿ ಮಾರ್ಪಟ್ಟಿದೆ. ದೇಶವು ತಾಯಿನಾಡಾಗಿ, ಭೂಮಿಯೂ ಭೂಮಿ ತಾಯಿಯಾಗಿ, ಕ್ಷಮಾಧರಿತ್ರಿಯಾಗಿ, ನದಿಗಳು ಜಲದೇವತೆಗಳಾಗಿ, ಕಾಳಿದೇವತೆ ಶಕ್ತಿರೂಪದಲ್ಲಿ ಕಾಣುತ್ತಾಳೆ. ಇದು ಕೇವಲ ಆದರ್ಶದ ನೆಲೆಯಲ್ಲಿ ಮಾತ್ರ, ವಾಸ್ತವದಲ್ಲಿ ಗಂಡಿನ ಆಶ್ರಯದಲ್ಲಿ ಸ್ವಾತಂತ್ರ್ಯರಹಿತಳಾಗಿ ಅವನು ನೀಡುವ ದೈಹಿಕ, ಮಾನಸಿಕ ಹಿಂಸೆಗಳನ್ನು ಅನುಭವಿಸುವ ಅಬಲೆಯಾಗಿದ್ದಾಳೆ. ಈ ವೈರುಧ್ಯವನ್ನು ಕುರಿತು ಚಿಂತಿಸಿದ ಮೊದಲ ಮಹಿಳೆ ವೊಲಸ್ಟೋನ್ ಕ್ರಾಫ್ಟ್. ಈಕೆ ೧೮ನೆಯ ಶತಮಾನದಲ್ಲಿ ತನ್ನ ಪುಸ್ತಕವಾದ 'Vindication of Rights of women' ಎಂಬುದರಲ್ಲಿ ಈ ರೀತಿ ಚಿಂತಿಸಿದ್ದಾಳೆ.

"ಕಾಲ್ಪನಿಕವಾಗಿ ಅವಳಿಗೆ (ಮಹಿಳೆಗೆ) ಅತ್ಯಂತ ಮಹತ್ತ್ವದ ಸ್ಥಾನವಿದೆ. ಆದರೆ ವಾಸ್ತವಿಕವಾಗಿ ಅವಳು ಸಂಪೂರ್ಣವಾಗಿ ಕಡೆಗಣಿಸಲ್ಪಟ್ಟಿದ್ದಾಳೆ. ಕಾವ್ಯದಲ್ಲಿ ಮೊದಲಿನಿಂದ ತುದಿಯವರೆಗೂ ಅವಳೇ ವ್ಯಾಪಿಸಿರುತ್ತಾಳೆ; ಆದರೆ ಚರಿತ್ರೆಯಿಂದ ಮಾತ್ರ ಗೈರು ಹಾಜರಾಗಿರುತ್ತಾಳೆ. ಕಾಲ್ಪನಿಕ ಬರಹಗಳಲ್ಲಿ ಆಕೆ ರಾಜ ಮಹಾರಾಜರನ್ನು, ವಿಜಯಿಗಳನ್ನೂ ಆಳುತ್ತಿರುತ್ತಾಳೆ; ನಿಜ ಜೀವನದಲ್ಲಿ, ತನ್ನ ತಂದೆ ತಾಯಿಗಳ ಬಲವಂತಕ್ಕೆ ಅವಳ ಬೆರಳಿಗೆ ಉಂಗುರ ತೊಡಿಸಿದ ಯಾವುದೇ ಹುಡುಗನ ಆಳಾಗಿದ್ದಾಳೆ. ಸಾಹಿತ್ಯದಲ್ಲಿನ ಕೆಲವು ಅತ್ಯಂತ ಸ್ಫೂರ್ತಿದಾಯಕ ಶಬ್ದಗಳನ್ನು, ಗಾಢಚಿಂತನೆಗಳನ್ನೂ, ಆಡುವ ಆಕೆ ನಿಜಜೀವನದಲ್ಲಿ ಓದಲಾರದ, ಮಾತು ಬಾರದ ಮೂಢೆಯಾಗಿದ್ದಾಳೆ. ಕೇವಲ ತನ್ನ ಗಂಡನ ಆಸ್ತಿಯಾಗಿದ್ದಾಳೆ"[೨]

ಹೀಗೆ ಹೆಣ್ಣಿನ ವಾಸ್ತವ ಸ್ಥಿತಿಯನ್ನು ವೊಲಸ್ಟೋನ್ ಕ್ರಾಫ್ಟ್ ನಮ್ಮ ಮುಂದಿಡುತ್ತಾಳೆ. ಆದರ್ಶಗಳಿಂದ ಮುಕ್ತವಾದ ನಿಜವಾದ ಸ್ತ್ರೀಯನ್ನು ಕಂಡುಕೊಳ್ಳಲು ಹೊರಟ ಸ್ತ್ರೀವಾದಿಗಳಿಗೆ ಕಾಣಿಸಿದ ಮತ್ತೊಂದು ಆಘಾತಕಾರಿ ವಿಚಾರವೆಂದರೆ ಹೆಣ್ಣು ಪುರುಷ ನಿರ್ಮಿತ ಭಾಷೆಯನ್ನೇ ತನ್ನದಾಗಿಸಿಕೊಂಡಿರುವ ಕಟುಸತ್ಯ. ಅಪ್ರಜ್ಞಾಪೂರ್ವಕವಾದ ನೆಲೆಯಲ್ಲಿ ಇದನ್ನು ಒಪ್ಪಿಕೊಂಡಿರುವ ಆಕೆ

ಶತಶತಮಾನಗಳಿಂದ ಬಳಸುತ್ತಾ ಬಂದಿದ್ದಾಳೆ. ಆದ್ದರಿಂದಲೇ ಅವಳಿಗೆ ಸ್ವಾತಂತ್ರ್ಯವನ್ನು ಬಯಸುವ ಹೆಣ್ಣು, 'ಗಂಡುಬೀರಿ' ಯಾಗಿಯೂ, ಅಳುಬುರುಕ ಗಂಡಸು 'ಹೆಣ್ಣಿಗ' ನಾಗಿಯೂ ಕಾಣುತ್ತಾರೆ. ಇದೆಲ್ಲ ಬಂಧನಗಳಿಂದ ಹೆಣ್ಣು ವಿಮೋಚನೆ ಪಡೆಯಬೇಕೆಂಬ ಸತ್ಯವನ್ನು ಸ್ಪೆಂಡರರ 'ಮ್ಯಾನ್ ಮೇಡ್ ಲಾಂಗ್ವೇಜ್' ಎಂಬ ಗ್ರಂಥ ಎತ್ತಿಹಿಡಿಯಿತು.

ಈ ರೀತಿಯಾಗಿ ಸ್ತ್ರೀವಾದವು ಆದರ್ಶೀಕರಣದಿಂದ ಮುಕ್ತವಾದ, ಪುರುಷನಿರ್ಮಿತ ಭಾಷೆಯಿಂದ, ಪರಿಕಲ್ಪನೆಗಳಿಂದ ಗೃಹಿತಗಳಿಂದ ವಿಮುಕ್ತವಾದ ಸ್ತ್ರೀ ಅನನ್ಯತೆಯನ್ನು ಕಟ್ಟಿಕೊಳ್ಳಲು ಉತ್ಸುಕವಾದ ಸಂದರ್ಭದಲ್ಲಿ ಇದುವರೆಗಿನ ಸಾಹಿತ್ಯದಲ್ಲಿ ತಮ್ಮ ಸ್ಥಾನವೇನು? ಎಂಬ ಹುಡುಕಾಟಕ್ಕೂ ಕೈ ಹಾಕಿತು. ಏಕೆಂದರೆ ವಾಸ್ತವ ಬದುಕಿನ ತಾರತಮ್ಯಗಳೇ ಸಾಹಿತ್ಯದಲ್ಲೂ ಪಡಿಮೂಡುವುದರಿಂದ ಸಾಂಸ್ಕೃತಿಕ ಚೌಕಟ್ಟನ್ನು ಅರಿಯಲು ಸಾಹಿತ್ಯವನ್ನು ಸ್ತ್ರೀವಾದದ ದೃಷ್ಟಿಕೋನದ ಚಿಂತನೆಗೆ ಒಳಪಡಿಸಲಾಯಿತು. ಕನ್ನಡ ಸಾಹಿತ್ಯದಲ್ಲಿ ಇಂಥದ್ದೊಂದು ಪ್ರಯತ್ನ ದೊಡ್ಡ ಪ್ರಮಾಣದಲ್ಲಿ ನಡೆದದ್ದು ನಿಜವಾಗಿಯೂ ಮಹತ್ತ್ವವಾದದ್ದು. ಕನ್ನಡ ಸಾಹಿತ್ಯ ಚರಿತ್ರೆ ಅವಜ್ಞೆಗೆ ತಳ್ಳಿದ ನೂರಾರು ಮಂದಿ ಲೇಖಕಿಯರ ವಿಚಾರವನ್ನು 'ಮಹಿಳಾ ಸಾಹಿತ್ಯ ಚರಿತ್ರೆ' ಬೆಳಕಿಗೆ ತಂದಿತು. ನವೋದಯದ ಸಾಕಷ್ಟು ಮಂದಿ ಲೇಖಕಿಯರ ಕೃತಿಗಳು ಪ್ರಕಟಗೊಂಡವು.

ಸ್ತ್ರೀವಾದಿ ವಿಮರ್ಶೆಯ ವೈಶಿಷ್ಟ್ಯವನ್ನು ಗುರುತಿಸಿದ ಡಿ.ಆರ್. ನಾಗರಾಜರವರು ತಮ್ಮ "ಸ್ತ್ರೀವಾದಿ ಸಾಹಿತ್ಯಮೀಮಾಂಸೆಯ ಸ್ವರೂಪ : ಸಮಸ್ಯೆಗಳು – ಸಾಧ್ಯತೆಗಳು" ಎಂಬ ಲೇಖನವನ್ನು ಮಂಡಿಸಿದ್ದಾರೆ.

"ಸ್ತ್ರೀವಾದಿ ಸಾಹಿತ್ಯದ ವಿಶಿಷ್ಟತೆ ಇರುವುದೇ ಗಂಡು ಯಾವುದನ್ನು ಹೆಣ್ಣಿನ ನೇತ್ಯಾತ್ಮಕ ಲಕ್ಷಣಗಳು ಎಂದು ಭಾವಿಸಿದ್ದನೋ ಅವಕ್ಕೆ ತಾತ್ವಿಕ ಸವಲತ್ತು ನೀಡಿದ್ದಲ್ಲಿ, ಹೆಣ್ಣು ಚಂಚಲೆ ಎಂದಿರಾ? ಚಾಂಚಲ್ಯವೇ ಪ್ರತಿರೋಧದ ಅಂತಿಮ ರೂಪ. ನಿಶ್ಚಿತವಾದದ್ದು ಪ್ರಬುದ್ಧತೆಯ ರೂಪ. ಹೆಂಗಸು ಹಾಗಲ್ಲ ಎಂದಿರಾ? ಅನಿಶ್ಚಿತ ಹಾಗೂ ಅಸಂದಿಗ್ಧತೆಗಳೇ ಸಾಹಿತ್ಯ ರೂಪದ ಪರಮಾಸಕ್ತಿ. ಹೆಣ್ಣಿಗೆ ಸುಪ್ತತೆಯೇ ಐಸಿರಿ ಎಂದಿರಾ? ಸುಪ್ತತೆಯೇ ಕ್ರಾಂತಿಕಾರಿ ವಿದ್ರೋಹದ ಸಾಧನೆ. ಹೆಣ್ಣು ಕೇಂದ್ರವಲ್ಲ. ಆಕೆ ಅಂಚಿನವಳು ಎಂದಿರಾ? ಅಂಚೆ ಕೇಂದ್ರವನ್ನು ಹಿಡಿದು ಅಲ್ಲಾಡಿಸುತ್ತದೆ. ಹೆಣ್ಣಿಗೆ ಬುದ್ಧಿ ಮೊಣಕಾಲು ಕೆಳಗೆ ಎಂದಿರಾ? ಆಕೆಯ 'ಬುದ್ಧಿಹೀನತೆ' ನಿಮ್ಮ ಬುದ್ಧಿಹೀನತೆಯನ್ನು ಕಂಗೆಡಿಸುತ್ತದೆ. ಹೆಣ್ಣು ತೀವ್ರವಾಗಿರುತ್ತಾಳೆ. ನೈತಿಕವಲ್ಲ ಎಂದಿರಾ? ತೀವ್ರತೆಯನ್ನು ನೈತಿಕ ಎಂದು ಭಾವಿಸಿ ನಿಮ್ಮ ನೀತಿಗಳನ್ನು ನುಗುನುರಿ ಮಾಡುತ್ತಾಳೆ."[1]

ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಹೆಚ್ಚು ಪ್ರಾಚುರ್ಯ ಪಡೆದುಕೊಂಡ ಸ್ತ್ರೀವಾದದ ತತ್ತ್ವಗಳು ಕಟ್ಟಿಕೊಂಡ ಸ್ತ್ರೀ ಜಗತ್ತು ಸಿಮೋನ್ ದ ಬೊವಾರ 'ದ್ವಿತೀಯ ಲಿಂಗ' ಹಾಗೂ ಕೇಟ್ ಮಿಲ್ಲೆಟ್‌ರ 'ಲಿಂಗರಾಜಕಾರಣ' ದಂತಹ ಕೃತಿಗಳಿಂದ ಹೆಚ್ಚು ಪ್ರಭಾವಿತಗೊಂಡಿವೆ. ಅಷ್ಟೇ ಅಲ್ಲ. ಸ್ತ್ರೀತ್ವದ ನೆಲೆಗಳನ್ನು ಶೋಧಿಸುವಂತಹ, ಸ್ತ್ರೀಜಗತ್ತನ್ನು ಕಟ್ಟಿಕೊಳ್ಳುವ ದಿಟ್ಟ ನಿಲುವಿನಿಂದಲೇ ಸಾಹಿತ್ಯರಚನೆಗೆ ತೊಡಗಿಕೊಂಡಿದೆ. ನವ್ಯದ ಪ್ರಮುಖ ಲೇಖಕಿಯರಾದ ವೀಣಾಶಾಂತೇಶ್ವರ, ಪ್ರತಿಭಾ ನಂದಕುಮಾರ, ನೇಮಿಚಂದ್ರ, ರಾಜಲಕ್ಷ್ಮಿ ಎನ್, ರಾವ್ ಮುಂತಾದವರುಗಳಲ್ಲಿ ಈ ತೀವ್ರತೆಯನ್ನು ಕಾಣಬಹುದು. ಆದರೆ ನವೋದಯದ ಲೇಖಕಿಯರಲ್ಲೂ ವ್ಯವಸ್ಥೆಯನ್ನು ಪ್ರಶ್ನಿಸುವ ಸಂದರ್ಭದಲ್ಲಿ ಸ್ತ್ರೀಚಿಂತನೆಗಳು ಪ್ರಜ್ಞಾಪೂರ್ವಕವಾಗಿ ಪ್ರವೇಶಿಸಿರುವುದನ್ನೂ ಕಾಣಬಹುದು. ಇದರ ದಟ್ಟ ಚಿಂತನೆ ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಕಂಡುಬರುತ್ತದೆ.

ತನ್ನ ಕಾಲದ ಮಹತ್ತ್ವದ ಲೇಖಕರಾದ ಕುವೆಂಪು, ಕಾರಂತ, ಮಾಸ್ತಿಯವರಿಗೆ ಪ್ರಮುಖವಾಗದ ಸ್ತ್ರೀಜಗತ್ತಿನ ಸಮಸ್ಯೆಯೂ ವಿಧವಾ ಸಮಸ್ಯೆ ಹಾಗೂ ವರದಕ್ಷಿಣೆ ಸಮಸ್ಯೆಯನ್ನು ತಮ್ಮ ಕಥೆಗಳಲ್ಲಿ ವಸ್ತುವಾಗಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲ ಅವುಗಳ ಏಕಮುಖಿಯಲ್ಲದ ಬಹುಮುಖಿ ಸಮಸ್ಯೆಗಳೆಂದು, ಅವು ಹೇಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ, ನೈತಿಕಮೌಲ್ಯಗಳೊಂದಿಗೆ ತಳುಕುಹಾಕಿಕೊಂಡಿದೆಯೆಂಬುದನ್ನು ಗೌರಮ್ಮನವರು ವಿಚಾರಕ್ಕೆ ಗುರಿಮಾಡಿದ್ದಾರೆ. ಸ್ತ್ರೀವಾದದ ಎರಡು ಮಾದರಿಗಳಾದ ಗೋಚರಮಾದರಿ ಮತ್ತು ಅಗೋಚರ ಮಾದರಿಗಳಲ್ಲಿ ಗೌರಮ್ಮನವರು ಎರಡನೆಯ ಮಾದರಿಗೆ ಸೇರುತ್ತಾರೆ. ಇವತ್ತು ಸ್ತ್ರೀವಾದವು ಕಟ್ಟಿಕೊಂಡಿರುವ ತತ್ವಪ್ರಣಾಳಿಯನ್ನು ಸ್ತ್ರೀನಿಷ್ಠ ಧೋರಣೆಗಳನ್ನು ನವೋದಯದ ಲೇಖಕಿಯಾದ ಗೌರಮ್ಮನವರಲ್ಲಿ ಹುಡುಕುವುದು ಸರಿಯೇ? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಆದರೆ ಇಂದಿಗೂ ಪ್ರಸ್ತುತವಾಗಿರುವ ಸಾಮಾಜಿಕ ಸಮಸ್ಯೆಗಳನ್ನು ಕಥಾವಸ್ತುಗಳಾಗಿ ಆಯ್ಕೆಮಾಡಿಕೊಳ್ಳುವ ಮೂಲಕ ಸ್ತ್ರೀ ಜಗತ್ತಿನ ಒಳಪ್ರವೇಶ ಮಾಡಿ ಗೌರಮ್ಮ ಕಂಡುಕೊಂಡ ಸತ್ಯಗಳನ್ನು ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಕಂಡುಕೊಳ್ಳುವುದರ ಅಗತ್ಯತೆಯಿದೆ. ಏಕೆಂದರೆ ಸ್ತ್ರೀವಾದ ಎಲ್ಲ ಕಾಲದ ಹೆಣ್ಣಿನ ಒಳತೋಟಿಯಾಗಿದ್ದು ಮೊದಲ ತಲೆಮಾರಿನ ಲೇಖಕಿ ಗೌರಮ್ಮ ಅದಕ್ಕೆ ಮುಖಾಮುಖಿಯಾದದ್ದು ಬಹಳ ಮುಖ್ಯ.

ಸಾಮಾಜಿಕ ಸಮಸ್ಯೆಗಳನ್ನು, ಹೆಣ್ಣಿನ ಮನಸ್ಸಿನ ತೊಳಲಾಟಗಳೊಂದಿಗೆ ಇಟ್ಟು ನೋಡುವ ಮೂಲಕ ಸಮಾಜವು ಹೆಣ್ಣನ್ನು ಗ್ರಹಿಸಬೇಕಾದ, ತಿಳಿಯಬೇಕಾದ ಅನಿವಾರ್ಯತೆಯನ್ನು ಗೌರಮ್ಮ ತಮ್ಮ ಕಥೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಬೇಂದ್ರೆಯವರು ಸಹ ಗೌರಮ್ಮನವರ ಕಥೆಗಳ ಬಗ್ಗೆ ಮಾತನಾಡುತ್ತಾ,

"ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ; ಸೋದ್ದೇಶ ಲೇಖನದ ಸೂಚನೆಯಿದ್ದರೂ ಅವಾಸ್ತವ ಆರ್ಭಟೆಯಿಲ್ಲ; ಕಲೆಯು ನೈಜ್ಯವನ್ನು ಮರೆಮಾಚಿಲ್ಲ. ಎಲ್ಲೆಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಛವು 'ಶ್ರೀನಿವಾಸ', 'ಆನಂದ'ರ ಕತೆಗಳ ಮಾದರಿಯಾಗಿ ಹೃದಯಂಗಮವಾಗುವುದೆಂದು ನಾನು ನಂಬಿದ್ದೇನೆ."[೨] ಎಂದು ಹೇಳಿದ್ದಾರೆ. ಬೇಂದ್ರೆಯವರ ಮೇಲಿನ ಮಾತು ಗೌರಮ್ಮನವರ ಕಥೆಗಳಲ್ಲಿ ಆವೇಶಯುತ ಪ್ರತಿಭಟನೆಯಿಲ್ಲದುದರ ಬಗೆಗಿನ ಸಮಾಧಾನವನ್ನು ವ್ಯಕ್ತಪಡಿಸುವಂತಿದೆ. ಪುರುಷಕೇಂದ್ರೀತ ವ್ಯವಸ್ಥೆ ಮಹಿಳೆಯಿಂದ ಬಯಸುವುದು ಇದನ್ನೇ.

ಸ್ತ್ರೀವಾದಿ ದೃಷ್ಟಿಕೋನದಿಂದ ನೋಡಿದಾಗ ಗೌರಮ್ಮನವರ ಎಲ್ಲ ಕಥೆಗಳು ಒಂದಿಲ್ಲೊಂದು ರೀತಿಯಲ್ಲಿ ಹೆಣ್ಣಿನ ವಿವಿಧ ನೆಲೆಗಳನ್ನು ಶೋಧಿಸುವ ಇಲ್ಲವೆ ಅವರು ತಮ್ಮ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳಲು ನಡೆಸುವ ಪ್ರಯತ್ನವಾಗಿ ನಮಗೆ ಕಾಣುತ್ತದೆ. 'ವಾಣಿಯ ಸಮಸ್ಯೆ' ಯಂಥ ಕಥೆಯಲ್ಲಿ ಇಂದು ಮುರಿದ ಬೇಲಿಯನ್ನು ಮತ್ತೆ ಮತ್ತೆ ಕಟ್ಟುವ ಮೂಲಕ ತನ್ನ ಮನಸ್ಸನ್ನು ಈ ಸಮಾಜದ ಕಟ್ಟುಕಟ್ಟಳೆಗಳಿಂದ ಬಂಧಿಸಲು ನಿರಂತರವಾಗಿ ತೊಡಗಿರುತ್ತಾಳೆ. ಆದರೆ ಅವಳ ಮನಸ್ಸು ವಸ್ತುವಾಗಿರದ ಕಾರಣ ರತ್ನನನ್ನು ಬಯಸುವುದಕ್ಕೆ ಪ್ರಾರಂಭಿಸುತ್ತದೆ.

"ವಾಣಿ-ರತ್ನರ ಸಂಸಾರವನ್ನು ನೋಡಿದಂದಿನಿಂದ ತನ್ನ ಜೀವನದಲ್ಲೂ ಒಂದು ದೊಡ್ಡ ಅಭಾವವಿದೆ ಎಂಬುದನ್ನ ಕಂಡುಕೊಂಡಿತ್ತು. ಮೊದಲು ಬಲು ಅಸ್ಪಷ್ಟವಾಗಿ ಮೊಳೆತ ಈ ಭಾವನೆಯು ವಾಣಿ-ರತ್ನರಲ್ಲಿ ಹೆಚ್ಚಿನ ಬಳಕೆಯಾದೆಂತೆಲ್ಲ ಚಿಗುರುತ್ತಲೇ ಇತ್ತು. ಮತ್ತೆ ರತ್ನನೂ ಸದಾ ಇವಳನ್ನು ಯೋಚಿಸುತ್ತಿದ್ದುದರಿಂದಲೇನೋ ಅವಳ ಮನವು ಇಚ್ಛೆಗೆ ವಿರೋಧವಾಗಿ ರತ್ನನ ಕಡೆ ಒಲಿಯತೊಡಗಿತ್ತು."[೩]

ಇಂದು ಸಾಂಪ್ರದಾಯಿಕ ಚೌಕಟ್ಟಿನ ನಡುವೆ ವ್ರತದಂತೆ ಜೀವನವನ್ನು ನಡೆಸುತ್ತಿದ್ದರೂ ಎಲ್ಲೋ ಒಂದು ಕಡೆ ಮನುಷ್ಯನ ಸಹಜ ದೈಹಿಕಧರ್ಮವನ್ನು ಮೀರುವುದು ಅಸಾಧ್ಯವೆಂಬುದನ್ನು ಗೌರಮ್ಮ ಹೇಳುತ್ತಾರೆ. ರತ್ನನಿಂದ ಬಂದ ಕಾಗದವನ್ನು ಓದಿದರೆ ಅವನನ್ನು ಬಯಸದೆ ಬಿಡಲಾರೆನೆಂಬ ಕಾರಣಕ್ಕಾಗಿ ಓದದೇ ಕಾಗದವನ್ನು ಬೆಂಕಿಗೆ ಹಾಕುವ ಇಂದುವಿನ ಡೋಲಾಯಮಾನ ಸ್ಥಿತಿಯೇ ಹೆಣ್ಣಿನ ವಾಸ್ತವ ಚಿತ್ರವನ್ನು ಹಿಡಿದಿಟ್ಟಿದೆ. ಪುರುಷನಂತೆ ಹೆಣ್ಣು ಸಹ ಎಷ್ಟೋ ಸಂದರ್ಭಗಳಲ್ಲಿ ವಯೋಧರ್ಮ ಸಹಜಗುಣಗಳನ್ನು ಹತ್ತಿಕ್ಕಲಾರಳು ಎಂಬ ವಾಸ್ತವ ಅರಿವು ಜೊತೆಗೆ ಅಸೆ ಕಾಮನೆಗಳು ಅಪರಾಧವೂ

ಅಲ್ಲವೆಂಬ ಪ್ರಜ್ಞೆ ಗೌರಮ್ಮ ನವರಲ್ಲಿದೆ. ಆದ್ದರಿಂದಲೇ ಇಂದುವಿನಂತಹ ಸಮರ್ಥ ಪಾತ್ರವನ್ನು ಚಿತ್ರಿಸಲು ಸಾಧ್ಯವಾಯಿತು.

ಇಂದುವಿಗಿಂತ ಭಿನ್ನಳಾದ ವಾಣಿ ತನ್ನ ಅಲಕ್ಷತನದಿಂದಲೋ ಅಥವಾ ಸೋಮಾರಿತನದಿಂದಲೋ ಒಟ್ಟಿನಲ್ಲಿ ಸಮಾಜ ಅವಳ ಮೇಲೆ ಹೇರುವ ಗೃಹಿಣಿತ್ವದ ಜಂಜಾಟಗಳಿಂದ ಮುಕ್ತಳಾಗಿರುತ್ತಾಳೆ. ಕೆಲಸದಿಂದ ದಣಿದು ಬರುವ ಗಂಡಿನ ಊಟದ ವ್ಯವಸ್ಥೆ ಮಾಡಬೇಕೆಂಬ ವಿಚಾರ ತಿಳಿದಿದ್ದರೂ ಇಂದುವಿನ ಜೊತೆ ಹರಟೆ ಹೊಡಯುತ್ತಿರುತ್ತಾಳೆ. ಗಂಡ ಬಂದಾಗ ತಾನು ಮಾಡಿದ ತಪ್ಪನ್ನು ಶಪಿಸಿಕೊಳ್ಳುವ ಮೂಲಕ ಪಶ್ಚಾತ್ತಾಪ ಪಡುತ್ತಾಳೆ. ಆದರೆ ಮರುದಿನ ಎಂದಿನಂತೆ ತನ್ನ ಸ್ವಭಾವವನ್ನು ಕಾಯ್ದುಕೊಳ್ಳುತ್ತಾಳೆ. ಸ್ವಭಾವತಃ ವಾಣಿ ಕೆಟ್ಟವಳಲ್ಲ, ಆದರೆ ಮುಗ್ಧೆ, ಅವಳಲ್ಲಿ ಮುಗ್ಧತೆ ಇದ್ದುದ್ದರಿಂದಲೇ ಗಂಡನ ಮನಸ್ಸಿನಲ್ಲಿ ಇಂದು ಸ್ಥಳವನ್ನಾಕ್ರಮಿಸುವ ವಿಚಾರವಾಗಲೀ, ಇಂದು ಮನೆಬಿಟ್ಟು ದಾಯಾದಿಗಳ ಮನೆ ಸೇರಲು ತನ್ನ ಗಂಡನೇ ಕಾರಣವೆಂಬ ವಿಚಾರವಾಗಲೀ ತಿಳಿಯದವಳಾಗುತ್ತಾಳೆ. ಒಟ್ಟಿನಲ್ಲಿ ಸಮಾಜದ ಎಲ್ಲಾ ನೀತಿನಿಯಮಗಳನ್ನು, ಕಟ್ಟುಕಟ್ಟಳೆಗಳನ್ನು ತಿಳಿದುಕೊಂಡು ನೆಮ್ಮದಿಯಿಂದ ಬಾಳಲಾಗದ ಇಂದುವಿಗಿಂತ, ಮುಗ್ಧಳಾಗಿ ತನ್ನ ಜೀವನವನ್ನೂ ಗಂಭೀರವಾಗಿ ಪರಿಗಣಿಸದೆ ಜೀವಿಸುವ ವಾಣಿಯೇ ಹೆಚ್ಚು ನೆಮ್ಮದಿವಂತೆ ಎನಿಸುತ್ತಾಳೆ.

ಭಾರತೀಯ ಹೆಣ್ಣಿನ ಸಮಸ್ಯೆಗಳಲ್ಲಿ ಬಹುಸಾಂದ್ರವಾದದ್ದು ವಿಧವಾ ಸಮಸ್ಯೆ, ಅವರ ಸಂಕೀರ್ಣತೆ ಗೌರಮ್ಮನವರನ್ನು ಹೆಚ್ಚು ಕಾಡಿರುವ ವಿಚಾರವಾಗಿದೆ ಎಂದೆನಿಸುತ್ತದೆ. ಏಕೆಂದರೆ ಅವರ 'ವಾಣಿಯ ಸಮಸ್ಯೆ', 'ಒಂದು ಪುಟ್ಟ ಚಿತ್ರ', 'ಅಪರಾಧಿ ಯಾರು', 'ಪುನರ್ವಿವಾಹ' ದಂತಹ ಕಥೆಗಳಲ್ಲಿ ವಿಧವೆಯರು ಸಮಾಜದಲ್ಲಿ ಅನುಭವಿಸುವ ವಿವಿಧ ಸಂಕಟಗಳ ಚಿತ್ರಣವಿದೆ. ಎಷ್ಟೋ ತಂದೆತಾಯಿಗಳು ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವ ಸಲುವಾಗಿ ಅಥವಾ ಸಂಪ್ರದಾಯದ ಹೆಸರಲ್ಲಿ ಬಾಲ್ಯವಿವಾಹಗಳನ್ನೇರ್ಪಡಿಸುತ್ತಾರೆ. ಅಷ್ಟೇ ಅಲ್ಲ ರೋಗಿಷ್ಟ ಗಂಡು ಅಕಾಲ ಮರಣಕ್ಕೆ ತುತ್ತಾದರೆ ಅಪ್ರಾಪ್ತ ಬಾಲಕಿಯೆಂದು ಸಹ ಹೆಣ್ಣಿನ ಬಗ್ಗೆ ಕರುಣೆ ತೋರದೆ ಕೇಶಮುಂಡನ ಮಾಡಿಸಿ ಕೆಂಪು ಸೀರೆ ಉಡಿಸಿ ಮೂಲೆಗೆ ಕೂರಿಸುತ್ತಾರೆ. ಆಟವಾಡುವ, ಕನಸ್ಸನ್ನು ಕಾಣುವ ವಯಸ್ಸಿನಲ್ಲಿ ಹೆಣ್ಣುಮಕ್ಕಳು ಈ ರೀತಿ ವ್ಯವಸ್ಥೆಯ ಕಬಂಧ ಬಾಹುಗಳಿಗೆ ಸಿಕ್ಕಿ ನಲುಗುವುದು ಮನಸ್ಸಿಗೆ ದುಃಖವನ್ನುಂಟುಮಾಡುತ್ತದೆ. ಇಂತಹ ಕ್ರೂರವ್ಯವಸ್ಥೆಯನ್ನು ಬೇಂದ್ರೆಯವರು ಸಹ ನಮ್ಮ 'ಪುಟ್ಟ ವಿಧವೆ" ಎಂಬ ಕವನದಲ್ಲಿ ವಿಮರ್ಶೆಗೊಡ್ಡಿದ್ದಾರೆ.

"ತಲೆಭಾರ ಇಳಿದಿತ್ತು ಅಂಗಾರ ಬೆಳೆದಿತ್ತು
ಮೈಯನ್ನು ಮುಚ್ಚಿತು ಕೆಂಪು ಸೀರೆ
ಆದರಯ್ಯೋ ಪಾಪ ! ಆಕೆಯಿನ್ನು ಮಗುವು
ಸಿಂಗಾರವಿರದೆ ! ಆ ಮಾತೆ ಬೇರೆ

ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೊ
ಹೂಬತ್ತಿ ಹೊಸೆಯಲಿಕೆ ಮೈ ತಳೆದಳೊ.
ಎಂಬಂತೆ ಬಾಳ ಕಳೆದಳು ಬಾಲೆ ; ಹೂಮಾಲೆ
ಮುಳ್ಳುಕಂಟೆಯ ಮೇಲೆ ತಾನೆಳೆದಳೊ !"[೬]

ಎಂಬ ಸಾಲುಗಳು ವಿಧವೆಯರ ದುಸ್ಥಿತಿಯನ್ನು ನಮಗೆ ಮನವರಿಕೆ ಮಾಡಿಕೊಡುತ್ತವೆ. ಎಂ.ಕೆ. ಇಂದಿರಾರವರು ತಮ್ಮ 'ಫಣಿಯಮ್ಮ' ಕಾದಂಬರಿಯಲ್ಲಿ ಹೇಗೆ ಬಾಲವಿಧವೆ ಬೇರೆಯವರ ಸೇವೆಯನ್ನು ಮಾಡುವುದರಲ್ಲೇ ಇಡೀ ಆಯಸ್ಸನ್ನು ಕಳೆಯುತ್ತಾಳೆ ಎಂಬುದನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕುವೆಂಪುರವರ ವೈಚಾರಿಕ ಕವನವಾದ

"ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?"[೭]

ಎಂಬ ಮಾತುಗಳನ್ನು ಇಂದಿನ ಜಗತ್ತು ಅರಿಯಬೇಕಾದ ಅನಿವಾರ್ಯತೆಯನ್ನು ಕೊಡಗಿನ ಗೌರಮ್ಮ ತಮ್ಮ ಕಥೆಗಳ ಮೂಲಕ ತೋರ್ಪಡಿಸಿದ್ದಾರೆ.

ಸಾಮಾಜಿಕ ಸಮಸ್ಯೆಯಾಗಿರುವ ವಿಧವಾಸಮಸ್ಯೆಯನ್ನು ತಮ್ಮ ನಾಲ್ಕೂ ಕಥೆಗಳಲ್ಲಿ ವಿಭಿನ್ನ ವಿಶ್ಲೇಷಣೆಗೆ ಗುರಿಮಾಡಿರುವ ಗೌರಮ್ಮನವರು ಆ ಸಮಸ್ಯೆಯ ಪರಿಹಾರಗಳನ್ನು ಕಂಡುಕೊಳ್ಳುವ ರೀತಿಯೂ ಅನನ್ಯವಾಗಿದೆ. 'ವಾಣಿಯ ಸಮಸ್ಯೆ' ಯಲ್ಲಿನ ಇಂದು ಆರ್ಥಿಕ ಸಬಲೀಕರಣ ಪಡೆದಿರುವ ಏಕಾಂತ ಜೀವನವನ್ನು ನಡೆಸುವುದರಲ್ಲೇ ಸಂತೋಷವನ್ನು, ನೆಮ್ಮದಿಯನ್ನು ಕಂಡುಕೊಂಡಿರುವಾಕೆ. ಆದ್ದರಿಂದ ಅವಳಿಗೆ ಅನ್ಯಮಾರ್ಗದಿಂದ ಸಿಗುವ ರತ್ನನ ಆಶ್ರಯದ ಅಗತ್ಯವಿಲ್ಲ. ಆದರೆ 'ಒಂದು ಪುಟ್ಟ ಚಿತ್ರ' ಕಥೆಯ ವಿಧವೆಯಾದ 'ಶಾಂತೆ'ಯದು ಕಣ್ಣೀರಿನ ಕಥೆ. ಬಾಲ್ಯದಲ್ಲೇ ಗಂಡನನ್ನು ಕಳೆದುಕೊಂಡು ವಿಧವೆಯಾದ ಶಾಂತೆಗೆ ತಂದೆ–ತಾಯಿಗಳೂ ಇಲ್ಲದ ಕಾರಣ ಅಣ್ಣನ ಆಶ್ರಯದಲ್ಲಿ ಅತ್ತಿಗೆಯ ಬಿರುನುಡಿಗಳನ್ನು ಸಹಿಸಿಕೊಂಡು ಜೀವಿಸುವ ಸ್ಥಿತಿ ನಿರ್ಮಾಣವಾಗುತ್ತದೆ. ಇದರಿಂದ ಬಿಡುಗಡೆಯನ್ನು

ಪಡೆಯಬಹುದು ಎಂಬಾಸೆಯಿಂದ ಅತ್ತಿಗೆಯ ಅಣ್ಣನಿಗೆ ಸರ್ವಸ್ವವನ್ನೂ ಧಾರೆಯೆರೆಯುತ್ತಾಳೆ. ಆದರೆ ಅವನು,

> 'ನಿನ್ನ ಕಾಗದ ಸಿಕ್ಕಿತು. ಓದಿ ಆಶ್ಚರ್ಯವಾಯಿತು. ನಾನೇ ನಿನ್ನನ್ನು ಕೊಚ್ಚೆಗೆ ನೂಕಿದೆ ಎಂದು ಬರೆದಿರುವೆ. ನೀನು ಬೀಳಲು ಆತುರದಿಂದಿದ್ದುದರಿಂದಲ್ಲವೇ ನಾನು ನೂಕಿದ್ದು ? ಅಂತಹ ಸಾಧ್ವಿಯಾಗಿದ್ದರೆ ಹಿಂದೆಯೇ ಬುದ್ಧಿಯಿರಬೇಕಿತ್ತು. ಈಗ ನನ್ನನ್ನು ದೂರಿ ಏನು ಪ್ರಯೋಜನ?
> "All is fair in love, and war "[8]

ಎಂದು ಕಾಗದ ಬರೆಯುತ್ತಾನೆ. ಈ ರೀತಿ ವಂಚನೆಗೆ ಒಳಗಾದ ಶಾಂತಿ ಸಮಾಜವನ್ನು ಎದುರಿಸುವ ಧೈರ್ಯವಿಲ್ಲದೆ,

"ಅಣ್ಣ, ಕೆಟ್ಟ ಹೆಸರನ್ನು ಪಡೆಯದ ನಮ್ಮ ಮನೆತನಕ್ಕೆ ನಾನು ಕಳಂಕ ತಂದಿದ್ದೇನೆ. ಆದರದು ಇತರರಿಗೆ ತಿಳಿಯುವ ಮೊದಲೇ ನಾನದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ನಿನಗಾಗಲೀ ಅತ್ತಿಗೆಗಾಗಲೀ ನನ್ನ ಸ್ಥಿತಿಯನ್ನು ಹೇಳುವ ಧೈರ್ಯ ನನಗಿಲ್ಲ. ನಿನ್ನ ವ್ಯಸನವನ್ನು ಅತ್ತಿಗೆಯ ತಿರಸ್ಕಾರವನ್ನು ಸಹಿಸುವ ಶಕ್ತಿ ನನಗಿಲ್ಲ. ಹೇಳದೆ ಹೊರಟುಹೋಗುವುದಕ್ಕಾಗಿ ಕ್ಷಮಿಸು – ಶಾಂತೆ"[9]

ಎಂದು ಕಾಗದ ಬರೆದಿಟ್ಟು ಆತ್ಮಹತ್ಯೆಗೆ ಶರಣಾಗುತ್ತಾಳೆ. ಏಕೆಂದರೆ ಸಮಾಜವು ತಪ್ಪುಹಾದಿಯನ್ನು ತುಳಿದ ಗಂಡಸನ್ನು ಎಂದೂ ದೂಷಿಸುವುದಿಲ್ಲ. ಆದರೆ ಹೆಣ್ಣನ್ನು ಚುರುನುಡಿಗಳಿಂದ ಹಿಂಸಿಸುತ್ತದೆ. 'ಗ್ರಾಮಾಯಣ' ಕಾದಂಬರಿಯಲ್ಲಿಯೂ ಸಹ 'ರಾವ್‌ಬಹದ್ದೂರರು' ಈ ವಿಚಾರವನ್ನು ಅದ್ಭುತ ಕಥಾನಕವಾಗಿ ಮಾಡಿದ್ದಾರೆ. ಧಾರ್ಮಿಕ ಕೇಂದ್ರದ ಮುಖ್ಯವ್ಯಕ್ತಿಯಾದ ಪಡದಯ್ಯನೇ ಚಿಮಣಾಳ ಸ್ಥಿತಿಗೆ ಕಾರಣನಾದರೂ ವ್ಯವಸ್ಥೆ ಅವನನ್ನು ದೂಷಿಸದಿರುವನ್ನು ಕಾಣಬಹುದು. ಈ ರೀತಿ ಸಮಾಜದ ಅನ್ಯಾಯಕ್ಕೆ ಒಳಗಾಗುವ ಎಷ್ಟೋ ಅಸಹಾಯಕ ಹೆಣ್ಣುಮಕ್ಕಳು ತಮ್ಮ ನೋವಿಗೆ ಸಾವಿನಲ್ಲಿ ಪರಿಹಾರ ಕಂಡುಕೊಳ್ಳುತ್ತಿರುವ ಕಟುಸತ್ಯಕ್ಕೆ 'ಒಂದು ಪುಟ್ಟ ಚಿತ್ರ'ದ ಶಾಂತೆ ನಿದರ್ಶನವಾಗಿದ್ದಾಳೆ.

ಗೌರಮ್ಮನವರ ಮತ್ತೊಂದು ವಿಚಾರಪೂರ್ಣ ಕಥೆ 'ಅಪರಾಧಿ ಯಾರು?' ಎಂಬುದು. ಇಲ್ಲಿನ ಪಂಡಿತರ ಮಗಳಾದ ಪಾರ್ವತಿ ವಿಧವೆಯಾಗಿದ್ದು ತನಗಿರುವ ಪುಟ್ಟ ಮಗುವನ್ನು ಸಾಕುವ ಸಲುವಾಗಿ ತನ್ನ ಜಾತಿಯವರೆ ಆದ ನಾಗೇಶರಾಯರ ಮನೆ ಸೇರುತ್ತಾಳೆ. ಅವಳನ್ನು ತಮ್ಮ ಆಮಿಷಕ್ಕಾಗಿ ಬಳಸಿಕೊಂಡ ರಾಯರು ಕೊನೆಗೆ ಅವಳ ಮೇಲೆ ಅಪವಾದ ಹೊರೆಸಿ ಮನೆಯಿಂದ ಹೊರದೂಡುತ್ತಾರೆ.

ನಿರಾಶ್ರಿತಳಾದ ಆಕೆ ಸಾವಿಗೆ ಶರಣಾಗಲು ಮುಂದಾದಾಗ ಅನ್ಯಮತದ ಗೈಬಿ ಕಾಪಾಡುತ್ತಾಳೆ. ಅನಂತರ ಉನ್ನೀಸಳ ನೆರವಿನಿಂದಾಗಿ ಪಾರ್ವತಿ ರಜಿಯಾಳಾಗುತ್ತಾಳೆ.

"ಇದಕ್ಕೆ ಹೊಣೆ ಯಾರು ? ಅವಳೇ ? ರಾಯರೇ? ಅಥವಾ ನಮ್ಮ ಕ್ರೂರ ಸಮಾಜವೇ"[೧೦] ಎಂಬ ಪ್ರಶ್ನೆಗಳು ಕಥೆಯಲ್ಲಿ ಮೂಡುತ್ತವೆ.

ಪಾರ್ವತಿಯ ಸ್ಥಿತಿಗೆ ಕಾರಣವಾದ ವ್ಯವಸ್ಥೆಯನ್ನು ಟೀಕಿಸಿದ ಸಮಾಜ ಹೇಗೆ ಅಸಹಾಯಕ ಹೆಣ್ಣನ್ನು ದೂಷಿಸುತ್ತದೆ ಎಂಬುದನ್ನು ಈ ಕಥೆಯಲ್ಲಿ ಬರುವ ಒಬ್ಬ ಹಿಂದೂ ಧರ್ಮಿಯಳ ಸಂಭಾಷಣೆಯೇ ನಮಗೆ ತಿಳಿಸುತ್ತದೆ.

> "ಆ ಪಾರ್ವತಿ ನೋಡಿ – ಬೊಂಬೆಯ ಹಾಗೆ ಅಲಂಕಾರ ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ – ಆ ಪಂಡಿತರ ಮಗಳು – ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ. ನೋಡಿ ! ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಳೆಗೆ ಕಳುಹಿಸುವಾಗಲೇ ನನಗೆ ಗೊತ್ತಿತ್ತು. ಅವಳು ಹೀಗಾಗುವಳೆಂದು ! ಇದು ಬೇರೆ ತಮಾಷೆ ನೋಡಿ ಪಕ್ಕದ ಮನೆ ಲಕ್ಷ್ಮಿ ಇದ್ದಾಳಲ್ಲ. ಈ ಜಾತಿಗೇಡಿಯ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದವಳು – ಅವಳೆನ್ನುತ್ತಾಳೆ: 'ಸೇರದೆ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವುದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ, ಬಾವಿಯ ದಾರಿ ತೋರಿಸಿದ ನಿಮಗೆ ಅವಳೇನಾದರೇನು ?' ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ ! ಜಾತಿ ಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳಬೇಕಾಗಿತ್ತಂತೆ ನೋಡಿದಿರಾ ಹೇಗಿದೆ ಎಂತ !"[೧೧]

ಎಂದು ಹೇಳುತ್ತಾಳೆ. ಇಲ್ಲಿ ಅವರಿಗೆ ಪಾರ್ವತಿಯ ತಪ್ಪು ಕಾಣುತ್ತಿದೆಯೇ ಹೊರತು ಅವಳ ಸ್ಥಿತಿಗೆ ಕಾರಣರಾದ ನಾಗೇಶರಾಯರಾಗಲಿ, ವ್ಯವಸ್ಥೆಯಾಗಲಿ ಅಲ್ಲ. ಒಂದು ವೇಳೆ ಗಂಡಸರ ಜಾರತನವನ್ನು ಬಯಲಿಗೆಳೆಯಲು ಪ್ರಯತ್ನಿಸಿದರೆ ಅಂಥವರ ಬಾಯನ್ನು ಮುಚ್ಚಿಸಲಾಗುತ್ತದೆ. 'ವೈದೇಹಿ' ಯವರ 'ಅಕ್ಕು' ಎಂಬ ಕಥೆಯ ಅಕ್ಕು ತನ್ನ ಚಿಕ್ಕಪ್ಪನ ಜಾರತನವನ್ನು ಬಯಲಿಗೆಳೆಯಲು ಪ್ರಯತ್ನಿಸಿದಾಗ ಸುತ್ತಲಿದ್ದ ಜನ,

"ಹಾಕ್ ನಾಕ್, ಇನ್ನೂ ಹಾಕು, ಸತ್ರೆ ಸತ್ತತ್ ಮರ್ರುಕುವಮ್ ಯಾರಿಲ್ಲ"

ಎನ್ನುತ್ತಾರೆಯೇ ಹೊರತು ಹೊಡೆತವನ್ನು ತಡೆಯಲು ಮುಂದಾಗುವುದಿಲ್ಲ. ವಿಶ್ಲೇಷಣೆಯ ಮೂಲಕ ಕಂಡುಕೊಳ್ಳಬಹುದಾದ ಸತ್ಯ ಅದಾದರೂ ಅದನ್ನು ಒಪ್ಪಿಕೊಂಡು ಜೀರ್ಣಿಸಿಕೊಳ್ಳುವ ಸಾಮರ್ಥ್ಯ

ಸಮಾಜಕ್ಕೆ ಇಲ್ಲದಿರುವ ಕಾರಣದಿಂದ ತನ್ನ ಹುಳುಕುಗಳನ್ನು ಮುಚ್ಚಿಕೊಳ್ಳಲು ಮತ್ತೊಬ್ಬರ ಕೊರಳನ್ನು ಬಲಿಗೊಡುತ್ತದೆ ಎಂಬ ವಿಚಾರ ಇಲ್ಲಿ ಸ್ಪಷ್ಟವಾಗಿದೆ.

'ಪುನರ್ವಿವಾಹ' ದಂತಹ ಕಥೆಯಲ್ಲಿ ವ್ಯವಸ್ಥೆಯನ್ನು, ರೂಢಿಗತ ಸಂಪ್ರದಾಯಗಳನ್ನು ವಿಮರ್ಶೆಗೊಡ್ಡಲು ಗೌರಮ್ಮನವರಿಗೆ ಸಾಧ್ಯವಾಗಿದೆ. ವಿಧುರನೊಬ್ಬ ಮದುವೆಯಾಗಲು ಬಯಸಿದ 'ರಾಜಿ' ಎಂಬಾಕೆ ವಿಧವೆಯೆಂಬ ಸಂಗತಿ ಅವಳಿಂದಲೇ ತಿಳಿದ ಮೇಲೆ ಕೋಪಗೊಂಡು,

"ನೀನು ವಿಧವೆ ಎಂದು ತಿಳಿದಿದ್ದರೆ ನಿನ್ನ ಮುಖವನ್ನು ಸಹ ನೋಡುತ್ತಿರಲಿಲ್ಲ. ಯಾವ ವಿಧವೆಯನ್ನು ಪ್ರಾತಃಕಾಲ ನೋಡಿದರೆ ಅಮಂಗಲವೂ ಅಂತಹ ವಿಧವೆಯನ್ನು ಮದುವೆಯಾಗುವವನು ನಾನಲ್ಲ"

ಎಂದು ನುಡಿಯುತ್ತಾನೆ. ಆಗ ರಾಜಿ ಒಬ್ಬ ದಿಟ್ಟ ಮಹಿಳೆಯಾಗಿ ಅವನಿಗೆ ಪ್ರತ್ಯುತ್ತರ ನೀಡುತ್ತಾಳೆ. ಇದಕ್ಕೆ ಕಾರಣ ಶಿಕ್ಷಣ ಅವಳಿಗೆ ನೀಡಿರುವ ಆತ್ಮವಿಶ್ವಾಸವಾಗಿದೆ.

"ನಿಮ್ಮಂತಹ ಕಾಮುಕರ ಮೋಹವನ್ನು ಮೆಚ್ಚಿ ನಿಮ್ಮ ತುಚ್ಛವಾದ ಐಶ್ವರ್ಯಕ್ಕೆ ಅಧಿಕಾರಿಯಾಗುವ ಆಸೆ ನನಗಿಲ್ಲ. ನಿಮ್ಮಂತಹವರ ಮೋಹಕ್ಕೆ ಬಲಿಯಾಗಿ ಬುದ್ಧಿ ಬರುವ ಮೊದಲೇ ವಿಧವೆಯರಾದ ನನ್ನ ಲಕ್ಷೋಪಲಕ್ಷ ಸಹೋದರಿಯರು ಎಂದಿನವರೆಗೆ ಸಮಾಜದ ಅನ್ಯಾಯಕ್ಕೆ ತುತ್ತಾಗುವರೋ ಅಂದಿನವರೆಗೆ ಹಿಂದೂ ಸಮಾಜದ ಉನ್ನತಿಯಾಗಲಾರದೆಂದು ತಿಳಿಯಿರಿ. ಈ ತರಹದ ಸಾಮಾಜಿಕ ಅನ್ಯಾಯದಿಂದ ಎಷ್ಟು ಹಿಂದೂ ವಿಧವೆಯರು ನಿರ್ಲಜ್ಜತನದ ಜೀವನವನ್ನು ಅವಲಂಬಿಸಿದ್ದಾರೆ ! ಎಷ್ಟು ವೇಶ್ಯೆಯರ ಸಂಖ್ಯೆಯು ಹೆಚ್ಚಾಗಿದೆ ? ಎಷ್ಟು ಬಾಲಹತ್ಯೆ, ಭ್ರೂಣಹತ್ಯೆಗಳು ನಡೆಯುತ್ತಿವೆ ಗೊತ್ತಿದೆಯೋ ? ಇದಕ್ಕೆಲ್ಲಾ ಕಾರಣರು ಯಾರು ? ಅಜ್ಞಾನಿಯಾದ ಒಬ್ಬ ಚಿಕ್ಕ ಬಾಲೆಯೇ ? ಶಾಸ್ತ್ರ-ಶಾಸ್ತ್ರವೆಂದು ಬಡಿದುಕೊಂಡು ಹೆದರಿಕೆಯಿಂದ ಎಳೆಮಕ್ಕಳನ್ನು ಮುದುಕರ ಕೊರಳಿಗೆ ಕಟ್ಟುವ ತಂದೆ ತಾಯಿಗಳೇ ? ಅಥವಾ ನಿಮ್ಮಂತಹ ಕಾಮುಕರೇ"

ಎಂದು ದಿಟ್ಟವಾಗಿ ಪ್ರಶ್ನಿಸುತ್ತಾಳೆ. ಶಾಸ್ತ್ರದ ಹೆಸರಿನಲ್ಲಿ ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಳನ್ನು ಬಯಲಿಗೆಳೆಯುತ್ತಾಳೆ. ಈ ಕಥೆಯಲ್ಲಿ ಕೊಂಚ ಆವೇಶವಿದ್ದರೂ, ಅದು ಸತ್ಯದ ಅನಾವರಣ ಮಾಡುವ ಜರೂರಿಗಾಗಿ ಬಹಳ ಮುಖ್ಯವಾಗುತ್ತದೆ.

ವಿಧವೆಯರ ಆತ್ಮಸ್ಥೈರ್ಯಕ್ಕೆ ಶಿಕ್ಷಣದ ಅಗತ್ಯವಿದೆಯೆಂಬ ಸತ್ಯವನ್ನು ಗೌರಮ್ಮನವರು ಕಂಡುಕೊಂಡಿದ್ದರು. ಇದೇ ಸತ್ಯವನ್ನು ಗುಲ್ವಾಡಿ ವೆಂಕಟರಾಯರು ತಮ್ಮ 'ಇಂದಿರಾಬಾಯಿ' ಕಾದಂಬರಿಯಲ್ಲಿ ಅನಾವರ ಮಾಡಿದ್ದಾರೆ. ಗಂಡನನ್ನು ಕಳೆದುಕೊಂಡ ಇಂದಿರಾಬಾಯಿ ಉನ್ನತ ಶಿಕ್ಷಣವನ್ನು ಪಡೆಯುವ ಮೂಲಕ ತನ್ನ ಜೀವನವನ್ನು ಸುಭದ್ರಗೊಳಿಸಿಕೊಳ್ಳುತ್ತಾಳೆ. ನವೋದಯದ ಪ್ರಮುಖ ಲೇಖಕಿಯರಾದ ಆರ್. ಕಲ್ಯಾಣಮ್ಮ ಹಾಗೂ ತಿರುಮಲಾಂಬರವರ ಜೀವನಗಳು ಇದಕ್ಕೆ ನಿದರ್ಶನಗಳಾಗಿವೆ.

ಗೌರಮ್ಮನವರು ತಮ್ಮ ನಾಲ್ಕು ಕಥೆಗಳಲ್ಲಿ ವಿಧವೆಯರ ಸಮಸ್ಯೆಗಳನ್ನು ಮುಖ್ಯವಾಗಿಸಿಕೊಳ್ಳುವ ಮೂಲಕ ಅದರ ಬಹುಮುಖಗಳನ್ನು ಸಮಾಜದ ಮುಂದೆ ಅನಾವರಣ ಮಾಡಿದ್ದಾರೆ. ಏಕೆಂದರೆ ವಿಧವೆಯ ಸಮಸ್ಯೆಯನ್ನು ಕೇವಲ ಬಾಹ್ಯಸ್ವರೂಪದಿಂದ ಕಲ್ಪಿಸಿ ಏಕಮುಖಿಗೊಳಿಸುವ ವ್ಯವಸ್ಥೆಯ ವ್ಯವಸ್ಥಿತ ಕುತಂತ್ರ ಸರಿಯಲ್ಲ. ಅಷ್ಟೇ ಅಲ್ಲ. ಅದರ ಆರ್ಥಿಕ, ಸಮಾಜಿಕ ಆಯಾಮಗಳನ್ನು ಅರಿಯುವುದು ಬಹಳ ಮುಖ್ಯ. 'ಇಂದು', 'ಶಾಂತಿ', 'ಪಾರ್ವತಿ', 'ರಾಜಿ' ಎಲ್ಲರೂ ವಿಧವೆಯರಾದರೂ ಅವರುಗಳ ಸಮಸ್ಯೆಗಳು ಭಿನ್ನ ಹಾಗೂ ಅವರುಗಳು ತಮ್ಮ ಜೀವನಕ್ಕಾಗಿ ಕಂಡುಕೊಳ್ಳುವ ಪರಿಹಾರಗಳು ಸಹ ವಿಭಿನ್ನವಾದವುಗಳೇ. ಇಲ್ಲೆಲ್ಲ ಸ್ತ್ರೀ ಅಸ್ತಿತ್ವದ ಹುಡುಕಾಟ ನಿರಂತರವಾಗಿ ನಡೆಯುತ್ತಿರುವುದು ನಮ್ಮ ಅರಿವಿಗೆ ಬರುತ್ತದೆ.

ಆಧುನಿಕ ಶಿಕ್ಷಣಕ್ಕೆ ತಮ್ಮನ್ನು ತೆರೆದುಕೊಂಡ ಮಹಿಳೆಯರು ಹೇಗೆ ತಮ್ಮ ಜೀವನದ ಮುಖ್ಯ ಘಟ್ಟವೆಂದೇ ಸಮಾಜದಿಂದ ಪರಿಗಣಿಸಲ್ಪಟ್ಟಿರುವ ವಿವಾಹದ ಹಂತದಲ್ಲಿ ತಮ್ಮ ನಿರ್ಣಯವೇ ಕೊನೆ ಎಂಬುದನ್ನು ಸಾಧಿಸಿ ತೋರಿಸುತ್ತಾರೆ ಎಂಬುದಕ್ಕೆ 'ಕೌಸಲ್ಯಾನಂದನ' ದಂತಹ ಕಥೆ ಅತ್ಯುತ್ತಮ ಉದಾಹರಣೆಯಾಗಿದೆ. ಇಲ್ಲಿನ ವಸಂತ ಕುಂಟನಾದ ರಾಮುವನ್ನೇ ಮದುವೆಯಾಗುತ್ತೇನೆ ಎಂದು ತೀರ್ಮಾನಿಸುವ ಮೂಲಕ ವಿವಾಹಕ್ಕೆ ದೈಹಿಕ ಸೌಂದರ್ಯವೋ, ದೈಹಿಕ ಕುರೂಪತೆಯೋ ಮುಖ್ಯ ಕಾರಣಗಳಾಗುವುದಿಲ್ಲ, ಆಂತರಂಗಿಕ ಸತ್ತ್ವವೇ ಪ್ರಮುಖವಾದುದು ಎಂಬುದನ್ನು ಸಮಾಜಕ್ಕೆ ತೋರಿಸಿಕೊಡುತ್ತಾಳೆ. ಅಷ್ಟೇ ಅಲ್ಲ ಹೆಣ್ಣು ತನ್ನ ಜೀವನ ನಿರ್ಧಾರವನ್ನು ತಾನೇ ತೆಗೆದುಕೊಳ್ಳಬಲ್ಲಳು ಹಾಗೂ ಅವಳಿಗೂ ಆಯ್ಕೆ ಸ್ವಾತಂತ್ರ್ಯ ಇರಬೇಕೆಂಬ ಸತ್ಯವನ್ನು ಸಾಬೀತುಗೊಳಿಸುತ್ತಾಳೆ. ವಿವಾಹಕ್ಕೆ ಸಂಬಂಧಪಟ್ಟ ಹೆಚ್ಚಿನ ವಿಚಾರಗಳನ್ನು 'ವಿವಾಹ ಮತ್ತು ವರದಕ್ಷಿಣೆ' ಎಂಬ ಅಧ್ಯಾಯದಲ್ಲಿ ಚರ್ಚೆಗೊಳಪಡಿಸಲಾಗಿದೆ.

ಪುರುಷನಿರ್ಮಿತ ಸಂಕಥನಗಳಲ್ಲಿ ಒಂದಾದ ವೇಶ್ಯಾ ಸಮಸ್ಯೆಯನ್ನು ಗೌರಮ್ಮ ತಮ್ಮ 'ಮನುವಿನ ರಾಣಿ' ಕಥೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹೇಗೆ ಸಮಾಜವು ವೇಶ್ಯೆಯರ ಜೀವನದಲ್ಲಿ ಪಾಲ್ಗೊಂಡಿರುವ ಪುರುಷರನ್ನು ದೂಷಿಸದೆ ಕೇವಲ ಹೆಣ್ಣನ್ನೇ 'ಪಾಪಿ' ಎನ್ನುವಂತೆ ಕಾಣುತ್ತದೆ ಎಂಬುದರ ಚಿಂತನೆಯಿದೆ. ಈ ಕಥೆಯಲ್ಲಿನ ವೈದ್ಯನ ಹೆಂಡತಿ ಪಾರ್ವತಿ ಆ ಊರಿನಲ್ಲಿದ್ದ ವೇಶ್ಯೆಯಾದ ರಾಜಮ್ಮನ ಮನೆಯ ಆಳು ಬಂದು ವೈದ್ಯರನ್ನು ಕರೆದಾಗ ಪಾರ್ವತಿ ತನ್ನ ಗಂಡನನ್ನು ಹೋಗದಂತೆ ತಡೆದು,

"ಅವಳಿಗೇನೀಗ ಕೇಡು ! ಬೆಳಿಗ್ಗೆ ಹೋದರೆ ಸಾಲದೇನೊ ? ಇಷ್ಟಕ್ಕೂ ಸತ್ತು ಹೋದರೆ ಭೂಮಿ ಭಾರವೇ ಕಮ್ಮಿಯಾಯ್ತು"[೧೪]

ಎನ್ನುತ್ತಾಳೆ. ಈಕೆಯ ಪ್ರಕಾರ ವೇಶ್ಯೆ ಭೂಮಿಗೆ ಭಾರ. ಅವಳ ಸಹವಾಸ ಮಾಡುವ ಪುರುಷ ಭಾರವಲ್ಲವೇ ? ಹೆಣ್ಣಿನ ಮನವನ್ನು ಸ್ತ್ರೀಯರೇ ಯಾಕೆ ಅರ್ಥಮಾಡಿಕೊಳ್ಳಲಾರರು ? ಎಂಬಂತಹ ಪ್ರಶ್ನೆಗಳು ಮೂಡುತ್ತವೆ.

ಪಾರ್ವತಿಯ ಮಾತುಗಳನ್ನೇ ಸರಿಯೆಂದು ಭಾವಿಸಿದ ವೈದ್ಯ ಮಾರನೆಯ ದಿನ ಮಂಜುಳೆಯ ಮನೆಗೆ ಹೋಗುತ್ತಾನೆ. ಅಲ್ಲಿ ಮನು ಸಾಯುವ ಸ್ಥಿತಿಯಲ್ಲಿದ್ದಾನೆ. ಅವನನ್ನು ರಕ್ಷಿಸಲು ಸಾಧ್ಯವಾಗದ ಅಸಹಾಯಕತೆಯಿಂದ ಅವನತ್ತಲೇ ಶೂನ್ಯದೃಷ್ಟಿಯನ್ನು ಬೀರುತ್ತ ರಾಜಮ್ಮ ಕುಳಿತಿದ್ದಾಳೆ. ಈ ಸ್ಥಿತಿಯನ್ನು ಕಂಡು,

"ಅದೆಷ್ಟೋ ಜನರು ಎದೆ ಎದೆ ಬಡಿದುಕೊಂಡು ಅಳುವ ಕರುಣಾಕ್ರಂದನವನ್ನು ಕೇಳಿದ್ದೇನೆ. ಆದರೆ ಅದಾವ ದೃಶ್ಯಗಳೂ ರಾಜಮ್ಮನ ಮೂಕರೋದನದಷ್ಟು ವ್ಯಥೆಯನ್ನು ಉಂಟುಮಾಡಿರಲಿಲ್ಲ."[೧೫]

ಎಂದುಕೊಳ್ಳುತ್ತಾನೆ. ಇಷ್ಟು ದಿನ ಆಕೆ ಬಗ್ಗೆ ಇದ್ದ ಕೆಟ್ಟ ಭಾವನೆಗಳು ಮನಸ್ಸಿನಿಂದ ದೂರವಾಗುತ್ತದೆ. ಅಷ್ಟೇ ಅಲ್ಲದೆ ಅವನ ಹೆಂಡತಿಯ ಮನಸ್ಸು ಸಹ ಪರಿವರ್ತನೆಯಾಗುತ್ತದೆ.

ನಮ್ಮ ಸಮಾಜವು ವೇಶ್ಯೆಯರ ಬಗ್ಗೆ ಹೊಂದಿದ್ದ ಸಂಕುಚಿತ ಭಾವನೆಗಳೋ, ಉದಾರಿಮನೋಭಾವಗಳೋ, ಕಥಾವಸ್ತುವಾಗುವುದಕ್ಕಿಂತ ವ್ಯಕ್ತಿಗಳ ಮನೋವ್ಯಾಪಾರವೇ ಕಥಾವಸ್ತುವಾದದ್ದು ನವೋದಯ ಸಾಹಿತ್ಯದ ಬಹುಮುಖ್ಯ ಚಿಂತನೆಗಳಲ್ಲಿ ಒಂದಾಗಿದೆ. ರಾಜಮ್ಮನ ಬಗ್ಗೆ ಸಮಾಜವು ತಾಳುವ ನಿಲುವಿಗಿಂತ ಹುಚ್ಚನಾದರೂ ಮನುವಿನೊಂದಿಗೆ ಕೊನೆಯವರೆಗೂ ನೆಮ್ಮದಿಯಿಂದ

ಬಾಳಿದ ರಾಜಮ್ಮ ಬಹುಮುಖ್ಯಳಾಗುತ್ತಾಳೆ. ಇದೇ ವಸ್ತುವನ್ನು ತಮ್ಮ ಕಾದಂಬರಿಯ ವಸ್ತುವಾಗಿ ಆಯ್ಕೆ ಮಾಡಿಕೊಂಡ ಕಾರಂತರು ರಚಿಸಿದ 'ಮೈ ಮನಗಳ ಸುಳಿಯಲ್ಲಿ' ಎಂಬ ಕಾದಂಬರಿಯೂ ಮೂರು ತಲೆಮಾರುಗಳಿಗೆ ಸೇರಿದ ಜಾನಕಿ, ಮಂಜುಳೆ ಹಾಗೂ ಶಾರಿಯರು ತಮ್ಮ ವೃತ್ತಿಧರ್ಮವಾದ "ನಾವಿರುವುದು ಮೈ ಮಾರಿಕೊಳ್ಳುವುದಕ್ಕೆ ಹೊರತು ಮನವಲ್ಲ" ಎಂಬುದನ್ನು ಪಾಲಿಸಲಾಗದೆ ಹೇಗೆ ನಿಷ್ಠೆಯಿಂದ ತಮ್ಮ ಜೀವನವನ್ನು ಸಾಧ್ವಿಯರಂತೆ ನಡೆಯುತ್ತಾರೆ ಎಂಬುದನ್ನು ಹೇಳಲಾಗಿದೆ. ಆದ್ದರಿಂದಲೇ ಕಾದಂಬರಿಯ ಜಾನಕಿಯೂ ಯಾವುದೇ ಪತಿವ್ರತೆಯರಿಗಿಂತ ಕಡಿಮೆಯಿಲ್ಲವೆಂದು ಸಾಧ್ವಿಯರಿಂದಲೇ ಹೊಗಳಿಸಿಕೊಳ್ಳಲು ಸಾಧ್ಯವಾಯಿತು.

ಹೀಗೆ ಗೌರಮ್ಮನವರು ತಮ್ಮ ಕಥೆಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಹೆಣ್ಣಿನ ಸಮಸ್ಯೆಗಳ ಅನಂತ ಮುಖಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಆದ್ದರಿಂದಲೇ ಅವರಿಗೆ ವಿಧವಾಸಮಸ್ಯೆಯ ನಾನಾ ರೂಪಗಳನ್ನು, ಪುರುಷಸಂಕಥನಗಳ ವಿವಿಧ ಮಜಲುಗಳನ್ನು ಅರಿಯಲು ಸಾಧ್ಯವಾಯಿತು. ನವೋದಯದ ಮೊದಲ ತಲೆಮಾರಿನ ಲೇಖಕಿಯಾದ ಗೌರಮ್ಮನವರು ಇಷ್ಟು ಆಳವಾಗಿ ಸ್ತ್ರೀಜಗತ್ತನ್ನು ಅರಿಯಲು ಸಾಧ್ಯವಾಗಿದೆ ಎನ್ನುವುದೇ ಅವರ ಕಥೆಗಳು ಪಡೆದ ಯಶಸ್ಸು ಮತ್ತು ಅವುಗಳ ಪ್ರಸ್ತುತೆಯನ್ನು ತಿಳಿಸುತ್ತದೆ.

## ಅಡಿಟಿಪ್ಪಣಿ

೧. ಕನ್ನಡ ಸಾಹಿತ್ಯ ಪುನರ್ ಮೌಲೀಕರಣ ಮಾಲೆ – 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ', 'ಆಶಯ ಲೇಖನ' ವಿಜಯಾ ದಬ್ಬೆ, ಪು–೧೧

೨. 'ಸುವರ್ಣ ಸಾಹಿತ್ಯ ವಿಮರ್ಶೆ' – ಸಂ. ಎಚ್. ದಂಡಪ್ಪ ಮತ್ತು ಬಿ. ಎನ್. ಸುಮಿತ್ರಾಬಾಯಿ ಪುಟ–೪೬೩

೩. 'ಭಾರತೀಯ ಸ್ತ್ರೀವಾದ' – ಸಂ. ಮನುಚಕ್ರವರ್ತಿ, 'ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ' ; ಸಮಸ್ಯೆಗಳು ಸಾಧ್ಯತೆಗಳು – ಡಾ. ಡಿ.ಆರ್. ನಾಗರಾಜ್ ಪುಟ–೧೩೦ ಮತ್ತು ೧೩೧

೪. 'ಜೀವನ ಪ್ರೀತಿ' – ಕೊಡಗಿನ ಗೌರಮ್ಮ ಬರೆದ ಎಲ್ಲಾ ಕಥೆಗಳು – ಸಂ. ಪ್ರೊ. ಕಾಳೇಗೌಡ ನಾಗವಾರ, ಬೇಂದ್ರೆ ಮುನ್ನುಡಿ ಪುಟ–೨೧೩

೫. 'ವಾಣಿಯ ಸಮಸ್ಯೆ' – 'ಜೀವನ ಪ್ರೀತಿ' ಕಥಾಸಂಕಲನ – ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೨

೬. 'ವಿನಯ' – ಅಂಬಿಕಾತನಯದತ್ತರ ಆಯ್ದ ಕವನಗಳ ಸಂಕಲನ ಸಂ – ವಾಮನ ಬೇಂದ್ರೆ, ಪುಟ–೫೬

೭. 'ಸಮಗ್ರ ಕಾವ್ಯ ಸಂಪುಟ–೧' (ಕುವೆಂಪು ಕವನಗಳ ಸಂಗ್ರಹ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ – ೩೬೮

೮. 'ಒಂದು ಪುಟ್ಟ ಚಿತ್ರ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ ೨೮

೯. 'ಒಂದು ಪುಟ್ಟ ಚಿತ್ರ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ ೩೧

೧೦. 'ಅಪರಾಧಿ ಯಾರು' – 'ಜೀವನ ಪ್ರೀತಿ' – ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೭೪

೧೧. 'ಅಪರಾಧಿ ಯಾರು' – 'ಜೀವನ ಪ್ರೀತಿ' – ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೭೧

೧೨. 'ಪುನರ್ವಿವಾಹ' – 'ಜೀವನ ಪ್ರೀತಿ' – ಕಥಾಸಂಕಲನ ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೨೫

೧೩. 'ಪುನರ್ವಿವಾಹ' – 'ಜೀವನ ಪ್ರೀತಿ' – ಕಥಾಸಂಕಲನ ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೨೬

೧೪. 'ಮನುವಿನ ರಾಣಿ' – 'ಜೀವನ ಪ್ರೀತಿ' – ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೦೬

೧೫. 'ಮನುವಿನ ರಾಣಿ' – 'ಜೀವನ ಪ್ರೀತಿ' – ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೦೭

## ೪. ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಗಾಂಧೀವಾದದ ಪ್ರಭಾವ

ಅಹಿಂಸೆಯನ್ನು ಪರಿಕಲ್ಪನೆಯನ್ನಾಗಿ, ಅಸ್ತ್ರವನ್ನಾಗಿ ಇಟ್ಟುಕೊಂಡು ಬ್ರಿಟಿಷರ ಮನಃಪರಿವರ್ತಿಸಿದ ಗಾಂಧಿಯು ತಮ್ಮ ವಿಚಾರಗಳಿಂದ, ಸತ್ಯಸಂಧತೆಯಿಂದ, ಸರಳ ವ್ಯಕ್ತಿತ್ವದಿಂದ ಸಾಕಷ್ಟು ಜನ ಭಾರತೀಯರ ಮನಗೆದ್ದಿದ್ದರು. ಅಷ್ಟೇ ಅಲ್ಲ 'ಯಂಗ್ ಇಂಡಿಯಾ' ದಂತಹ ಪತ್ರಿಕೆಯ ಮೂಲಕ ಯುವಜನತೆಯಲ್ಲಿ ವೈಚಾರಿಕತೆಯನ್ನು, ಉದಾರತೆಯನ್ನು, ಆತ್ಮವಿಮರ್ಶೆ ಹಾಗೂ ಆತ್ಮಸ್ಥೈರ್ಯಗಳನ್ನು ತುಂಬಲು ಶ್ರಮಿಸಿದರು. ಇದೆಲ್ಲದರ ಪರಿಣಾಮವೆಂಬಂತೆ ಸಾಕಷ್ಟು ನವೋದಯದ ಬುದ್ಧಿಜೀವಿಗಳು ಗಾಂಧಿಯವರ ತತ್ತ್ವಗಳಿಂದ, ವಿಚಾರಗಳಿಂದ ಪ್ರಭಾವಿತರಾಗಿದ್ದರು. ಹಾಗಾಗಿ ಅವರ ಸಾಹಿತ್ಯದ ಅಂತಸ್ಸತ್ವದಲ್ಲಿ ಗಾಂಧೀ ವಿಚಾರಗಳ ಎಳೆಯನ್ನು ಕಾಣಬಹುದು.

ಗಾಂಧೀಜಿ ಹೆಚ್ಚು ಒತ್ತು ನೀಡಿದ್ದ ಸನ್ಯಾಸತ್ವ, ಮನೋನಿಗ್ರಹ, ನಡೆನುಡಿಯ ಪರಿಶುದ್ಧತೆ, ಸರಳ ಜೀವನ, ದೇಶಸೇವೆ, ಸೌಂದರ್ಯ ಪರಿಕಲ್ಪನೆ, ಹಿಂಸೆ, ಸತ್ಯಾಗ್ರಹ, ಪಶ್ಚಾತ್ತಾಪ, ಸಚ್ಚಾರಿತ್ರ್ಯ, ಸದಾಚಾರಗಳು, ಮತ–ಜಾತಿ–ಮತಾಂತರ ವಿಚಾರಗಳು, ಅಸ್ಪೃಶ್ಯತೆಯ ಬಗೆಗಿನ ಅರಿವು, ಮನಃಪರಿವರ್ತನೆ ಹಾಗೂ ಸ್ತ್ರೀಪರ ಕಾಳಜಿಗಳು ನವೋದಯ ಲೇಖಕರ ಸಾಹಿತ್ಯದ ಪಾತ್ರ ನಿರ್ಮಾಣದ ಸಂದರ್ಭದಲ್ಲಿ ಅಪ್ರಜ್ಞಾಪೂರ್ವಕವಾಗಿ ಕೆಲಸ ಮಾಡಿದೆ. ಕುವೆಂಪುರವರ ಹೂವಯ್ಯ ಮನೋನಿಗ್ರಹದ ಆದರ್ಶ ಮೂರ್ತಿಯಾಗುವುದರ ಹಿಂದೆ, 'ನನ್ನ ದೇವರು' ಕಥೆಯ ನಾಯಕ ಸನ್ಯಾಸತ್ವವನ್ನು ಆಚರಿಸುವ ಮೂಲಕ ಭವ್ಯಮೂರ್ತಿಯಾಗಿ ಕಾಣುವುದರ ಹಿಂದೆ ಗಾಂಧಿ ಪ್ರಭಾವವಿದೆ. ಅಷ್ಟೇ ಅಲ್ಲ ಕಾರಂತರ 'ಮರಳಿ ಮಣ್ಣಿಗೆ' ಯ ರಾಮ ಐತಾಳ ವಿದ್ಯಾವಂತನಾದರೂ ನಗರದಿಂದ ಮತ್ತೆ ಹಳ್ಳಿಗೆ ಹೊರಟು ನೆಲೆಗೊಳ್ಳುವುದರ ಹಿಂದೆ ಗಾಂಧಿಯ 'ಸ್ವರಾಜ್ಯ' ಕಲ್ಪನೆ ಕೆಲಸ ಮಾಡಿದೆ. ಅಷ್ಟೇ ಏಕೆ ಮಾಸ್ತಿಯವರ ಸುಬ್ಬಣ್ಣನಂತೂ ಯಾರಿಗೂ ತೊಂದರೆಯನ್ನು ನೀಡದೆ, ಕಟುವಾಗಿ ಟೀಕಿಸಿದೆ ಜೀವನದ ಹಲವು ಸಂಕಟಗಳಿಗೆ ಸಂಗೀತದಿಂದ ನೆಮ್ಮದಿಯನ್ನು ಕಂಡುಕೊಳ್ಳುವ ಉದಾರಿಯಾಗುವುದರ ಹಿಂದೆ ಗಾಂಧಿಯಿದ್ದಾರೆ. ಹೀಗೆ ನವೋದಯದ ಯಾವ ಲೇಖಕರೂ ಗಾಂಧಿ ಪ್ರಭಾವದಿಂದ ಮುಕ್ತರಲ್ಲ ಎಂಬುದು ನಿರ್ವಿವಾದ ಸಂಗತಿಯಾಗಿದೆ. ಈ ಮಾತು ನವೋದಯದ ಲೇಖಕಿಯರಿಗೂ ಅನ್ವಯಿಸುತ್ತದೆ. ನಿರ್ದಿಷ್ಟವಾಗಿ ಗೌರಮ್ಮನವರ ಕಥೆಗಳನ್ನು ಗಮನಿಸಿದರೆ ಈ ಪ್ರಭಾವದ ದಟ್ಟ ಚಿತ್ರಣ ಸಿಗುತ್ತದೆ.

'ವಾಣಿಯ ಸಮಸ್ಯೆ' ಯಂಥ ಕಥೆಯಲ್ಲಿನ ಇಂದು ತನ್ನ ವಯಸ್ಸಿನವಳೇ ಆದ ವಾಣಿ ಅನುಭವಿಸುತ್ತಿರುವ ಜೀವನವನ್ನು ಕಂಡು ಒಳಗೊಳಗೆ ತನ್ನಲ್ಲಿರುವ ಕೊರತೆಗಳಿಗೆ ಮರುಗಿದರೂ ತನ್ನ

ಮನಸ್ಸಿನ ಆಸೆಗಳಿಗೆ ರೂಪು ಕೊಡದೆ ಅದುಮಿಡುವ ಮೂಲಕ ಮನೋನಿಗ್ರಹವನ್ನು ಮಾಡುತ್ತಾಳೆ. ಅಷ್ಟೇ ಅಲ್ಲ. ಸಂದಿಗ್ಧ ಪರಿಸ್ಥಿತಿಯಲ್ಲಿ ಆತ್ಮಸ್ಥೈರ್ಯದಿಂದ ತನ್ನ ಜೀವನದ ಬಗೆಗೆ ತೀರ್ಮಾನ ಮಾಡುತ್ತಾಳೆ. ಈ ಎಲ್ಲ ಕಥಾವಿಚಾರಗಳ ಹಿಂದೆ ಗಾಂಧೀ ತತ್ವಗಳು ಕೆಲಸ ಮಾಡಿರುವುದನ್ನು ನಾವು ಕಾಣಲು ಸಾಧ್ಯವಿದೆ. ಆದರೆ ಗಾಂಧೀ ಹೇಳುವ 'ಸನ್ಯಾಸತ್ವ' ಎಲ್ಲರಿಂದಲೂ ಅನುಸರಿಸಲು ಸಾಧ್ಯವಿಲ್ಲವೆಂಬುದನ್ನು ಗೌರಮ್ಮ ಕಂಡುಕೊಂಡಿದ್ದರು ಎಂಬುದಕ್ಕೆ 'ಒಂದು ಪುಟ್ಟ ಚಿತ್ರ' ದ ವಿಧವೆ ಶಾಂತಿ ರಘುವಿನಿಂದ ಗರ್ಭಿಣಿಯಾಗುವುದೇ ಸಾಕ್ಷಿ. ಎಲ್ಲೋ ಒಂದು ಕಡೆ ಗಾಂಧಿ ಆಶಯಗಳು ಸಂಪೂರ್ಣವಾಗಿ ಪ್ರಾಯೋಗಿಕವೇ ? ಎಂಬ ಪ್ರಶ್ನೆ ಗೌರಮ್ಮನವರನ್ನು ಕಾಡಿದೆ. ಕುವೆಂಪುರವರ 'ನನ್ನ ದೇವರು' ಕಥೆಯಲ್ಲಿ ಗಂಡನನ್ನು ಕಳೆದುಕೊಂಡ ಕಥಾನಾಯಕಿ ತನ್ನ ಭಾವನನ್ನು ಬಯಸುತ್ತಾಳೆ. ಆದರೆ ಅವನ ಮನೋನಿಗ್ರಹದ ಮುಂದೆ ಈಕೆ ಸೋಲೊಪ್ಪುತ್ತಾಳೆ. ಇದರಿಂದ ಸ್ಪಷ್ಟವಾಗುವ ಚಿತ್ರವೆಂದರೆ ಮನೋನಿಗ್ರಹ ಹಾಗೂ ಸನ್ಯಾಸತ್ವಗಳೆಂಬ ಆದರ್ಶಗಳನ್ನು ಎಲ್ಲರೂ ಸಾಧಿಸಲಾರರು. ಗೌರಮ್ಮನವರ 'ಸನ್ಯಾಸಿ ರತ್ನ' ಎಂಬ ಕಥೆಯು ಸಹ ಇದನ್ನೇ ಪ್ರತಿಪಾದಿಸುತ್ತದೆ. ಕಥಾನಾಯಕ ರತ್ನ ತನ್ನ ಗೆಳೆಯ ರಾಜ ಪ್ರೀತಿ, ವಿವಾಹಗಳೆಂಬ ಬಂಧನಕ್ಕೊಳಗಾಗುವುದನ್ನು ಟೀಕಿಸುತ್ತಿರುತ್ತಾನೆ. ಆದರೆ ಕೊನೆಗೆ ವಾಣಿಯ ಸಂಗೀತಕ್ಕೆ ಮಾರುಹೋಗಿ ಅವಳನ್ನು ಮದುವೆಯಾಗಲು ಬಯಸುತ್ತಾನೆ. ಕಥೆಯ ಪ್ರಾರಂಭದಲ್ಲಿ ರತ್ನ ಸನ್ಯಾಸತ್ವ ಪರಿಕಲ್ಪನೆಯಲ್ಲಿ ಅಚಲ ನಿಷ್ಠೆಯುಳ್ಳವನಾಗಿ ಕಂಡರೂ ಕೊನೆಗೆ ಸಂಸಾರ ಸಾಗರಕ್ಕೆ ಆಸೆಪಡುತ್ತಾನೆ. ಸನ್ಯಾಸತ್ವ, ಮನೋನಿಗ್ರಹಗಳನ್ನು ಅಳವಡಿಸಿಕೊಳ್ಳುವುದು ಸುಲಭವಲ್ಲ ಎಂಬ ದೃಷ್ಟಿ ಈ ಕಥೆಯ ಹಿಂದೆ ಕೆಲಸ ಮಾಡಿದೆ.

ಪ್ರತಿಯೊಬ್ಬ ಮನುಷ್ಯ ಒಂದಿಲ್ಲೊಂದು ತಪ್ಪನ್ನು ತನ್ನ ಜೀವಮಾನದಲ್ಲಿ ಮಾಡಿರುತ್ತಾನೆ. ಆದರೆ ಅದನ್ನು ಒಪ್ಪಿಕೊಳ್ಳುವ ಗಟ್ಟಿತನ, ಪಶ್ಚಾತ್ತಾಪ ಪಡುವ ಪ್ರಾಮಾಣಿಕತೆ ಕೆಲವರಲ್ಲಿ ಮಾತ್ರವಿರುತ್ತದೆ. ಇಂತಹ ವಿಚಾರಗಳನ್ನೊಳಗೊಂಡಿರುವ ಕಥೆಗಳೇ 'ಪ್ರಾಯಶ್ಚಿತ್ತ' ಹಾಗೂ 'ಒಂದು ಪುಟ್ಟ ಚಿತ್ರ'. 'ಪ್ರಾಯಶ್ಚಿತ್ತ' ಕಥೆಯ ನಾಯಕನಾದ ಮೂರ್ತಿಯ ತಂದೆ ಅವನು ಮದುವೆಯಾಗಲು ಬಯಸಿದಂತಹ ನಲಿನಿಯ ತಾಯಿಯ ಸಾವಿಗೆ ಕಾರಣನಾಗಿರುತ್ತಾನೆ. ಆದರೆ ಆ ಪಾಪಪ್ರಜ್ಞೆ ಅವನನ್ನು ಎಂದೂ ಕಾಡುವುದಿಲ್ಲ. ಯಾವಾಗ ಮೂರ್ತಿ, ನಲಿನಿಯನ್ನು ಮದುವೆಯಾಗಲು ಹಠ ಹಿಡಿಯುತ್ತಾನೋ ಆಗ ಸಾಕಷ್ಟು ಕೋಪಗೊಂಡ ತಂದೆ ಅವನೊಂದಿಗೆ ಮಾತನ್ನೇ ಬಿಡುತ್ತಾನೆ. ಆದರೆ ಹಠ ಬಿಡದ ಮೂರ್ತಿ ಅವಳನ್ನು ಮದುವೆಯಾದಾಗ ಮಾತ್ರ. "ನನ್ನ ಪಾಪದ ಪ್ರಾಯಶ್ಚಿತ್ತವಿದು" ಎಂದು ನಿಟ್ಟುಸಿರುಬಿಡುತ್ತಾನೆ. ಇದೇ ರೀತಿ

‘ಒಂದು ಪುಟ್ಟ ಚಿತ್ರ’ದ ರಘು ಶಾಂತೆಯನ್ನು ಮದುವೆಯಾಗುತ್ತೇನೆಂದು ನಂಬಿಸಿ ಮೋಸ ಮಾಡಿದರೂ ಮುಂದೆ ಪತ್ರಿಕೆಯಲ್ಲಿ ಅವಳ ಸಾವಿನ ಸುದ್ದಿ ಪ್ರಕಟವಾದಾಗ,

“ಗಂಡಸರು ಹೆಂಗಸರಿಗಿಂತ ಧೈರ್ಯವಂತರಂತೆ; ಸಹನಶಕ್ತಿ ಇರುವವರಂತೆ; ನಿಜವೆಂದು ನಾನು ನಂಬಿದ್ದೆ. ಆದರೆ, ಆ ಪತ್ರಿಕೆಯನ್ನು ಓದಿದ ಮೇಲೆ ಮಾತ್ರ ತಡೆಯಲಾರದೆ ಹೋದೆ. ಹಾಗೆಯೇ ಮೇಜಿನ ಮೇಲೆ ಮಲಗಿದೆ. ಮಧ್ಯಾಹ್ನದ ಊಟಕ್ಕೆ ನನ್ನ ಹೆಂಡತಿಯು ಕರೆಯುತ್ತಿದ್ದಾಳೆ. ಊಟವೆ! ಶಾಂತೆಯನ್ನು ಕೊಂದ ನನಗೆ ಊಟವೇ !”

ಎಂದು ಪಶ್ಚಾತ್ತಾಪ ಪಡುತ್ತಾನೆ.

ಇದೇ ರೀತಿ ‘ಪುನರ್ವಿವಾಹ’ ದಂತಹ ಕಥೆಯಲ್ಲಿ ಹೆಂಡತಿ ಸಾವಿತ್ರಿಯನ್ನು ಕಳೆದುಕೊಂಡ ಗಂಡ ಆರು ತಿಂಗಳಾಗುವುದರೊಳಗೆ ರಾಜಿಯನ್ನು ಮದುವೆಯಾಗಲು ಬಯಸುತ್ತಾನೆ. ಇದನ್ನು ನಿರಾಕರಿಸುವ ರಾಜಿ ತಾನು ವಿಧವೆಯೆಂಬುದನ್ನು ಹೇಳಿ ಅವನಲ್ಲಿನ ಸಂಪ್ರದಾಯ ಮೂಢಾಂಧತೆಯನ್ನು ಬಯಲಿಗೆಳೆಯುತ್ತಾಳೆ. ಶಾಸ್ತ್ರ ಹಾಗೂ ವ್ಯವಸ್ಥೆಗಳ ಕ್ರೂರತೆಯನ್ನು ಅವನಿಗೆ ಮನದಟ್ಟು ಮಾಡಿಕೊಟ್ಟಾಗ ಅವನು ಪಶ್ಚಾತ್ತಾಪಕ್ಕೊಳಗಾಗಿ,

“ದೇವಿ, ನಿನ್ನ ಅಮೂಲ್ಯವಾದ ಉಪದೇಶದ ಪ್ರತಿಫಲವಾಗಿ ಕೊಡಲು ನನ್ನಲ್ಲೇನೂ ಇಲ್ಲ. ನಿನ್ನ ಪವಿತ್ರ ಚರಣಗಳ ಆಣೆಯಿಟ್ಟು ಇನ್ನು ಮುಂದಿನ ನನ್ನ ಈ ಅಲ್ಪ ಜೀವನವನ್ನು ವಿಧವೆಯರ ಉದ್ಧಾರಕ್ಕಾಗಿಯೇ ವಿನಿಯೋಗಿಸುತ್ತೇನೆಂದು ಹೇಳುತ್ತೇನೆ. ನಿನ್ನ ಈ ಪವಿತ್ರ ಚರಣಗಳಡಿಯಲ್ಲಿ ವಿಧವೆಯರ ಹಿತಸಾಧನೆಗಾಗಿ ನನ್ನ ತನುಮನಧನಗಳನ್ನು ಧಾರೆ ಎರೆಯುತ್ತೇನೆ” ಎಂದು ಹೇಳುತ್ತಾನೆ.

ಯಾವ ವ್ಯಕ್ತಿ ತನ್ನ ವಯಸ್ಸು ಹಾಗೂ ಐಶ್ವರ್ಯಗಳಿಂದಾಗಿ ಜೀವನದಲ್ಲಿ ಏನನ್ನು ಬೇಕಾದರೂ ಪಡೆಯಬಲ್ಲೆ ಎಂಬ ಅಹಂನಿಂದ ಬೀಗುತ್ತಿದ್ದನೋ ಅಂಥವನು ರಾಜಿಯ ಮಾತುಗಳಿಂದ ಪರಿವರ್ತನೆಯಾಗುತ್ತಾನೆ. ಇಂತಹ ನಿಲುವುಗಳು ಕಥೆಯಲ್ಲಿ ಮೂಡಿಬಂದಿರುವುದರ ಹಿಂದೆ ಗಾಂಧಿಯ ಪ್ರಭಾವ ದಟ್ಟವಾಗಿದೆ. ಮನಃಪರಿವರ್ತನೆಯೇ ಪರಮಶಕ್ತಿ ಎಂದು ನಂಬಿದ್ದ ಗಾಂಧೀಜಿಯವರು ಪಶ್ಚಾತ್ತಾಪ, ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವ ಮೂಲಕ ಸತ್ಯವಂತನಾಗಬಹುದೆಂಬುದನ್ನು ನಂಬಿದ್ದರು.

ಗಾಂಧೀಜಿಯವರು ತಮ್ಮ ‘ಹಿಂದ್‌ಸ್ವರಾಜ್ಯ’ ಎಂಬ ಕೃತಿಯಲ್ಲಿ,

"ಎಲ್ಲ ಭಾರತೀಯರೂ ಇದು ಪಶ್ಚಾತ್ತಾಪ, ಪ್ರಾಯಶ್ಚಿತ್ತ, ಶೋಕಗಳ ಕಾಲ ಎಂದು ತಿಳಿಯಬೇಕು."

"ಪ್ರತಿಯೊಬ್ಬ ಭಾರತೀಯನೂ ಇಂಗ್ಲಿಷರು ನಮ್ಮಿಂದಲೇ ಇದ್ದಾರೆ. ಅವರನ್ನು ದೂರಿ ಪ್ರಯೋಜನವಿಲ್ಲ. ನಾವು ನಡೆ-ನುಡಿಯನ್ನು ಬದಲಾಯಿಸಿಕೊಂಡರೆ ಅವರು ಹೊರಟು ಹೋದಾರು. ಇಲ್ಲವೆ ತಾವೂ ಬದಲಿಸಿಕೊಂಡಾರು ಎಂಬುದನ್ನು ಅರಿಯಬೇಕು."[5]

ಎಂದು ಹೇಳಿದ್ದಾರೆ. ಇಡೀ ದೇಶ ಸ್ವಾತಂತ್ರ್ಯಕ್ಕಾಗಿ ತುಡಿಯುತ್ತಿದ್ದ ಕಾಲದಲ್ಲಿ ಜನರಿಗೆ ಮನಃಪರಿವರ್ತನೆಯ ಅಗತ್ಯವನ್ನು ಕುರಿತು ಗಾಂಧಿ ಈ ಮೇಲಿನ ಮಾತುಗಳನ್ನಾಡುತ್ತಾರೆ.

ಪ್ರತಿಯೊಬ್ಬ ವ್ಯಕ್ತಿ ಕೆಟ್ಟತನ ಜಗತ್ತಿನಲ್ಲಿದೆ ಎಂದು ದೂರುವುದರ ಬದಲಾಗಿ ತಾನು ಅದಕ್ಕೆ ಎಡೆಕೊಟ್ಟಿರುವ ಮನಸ್ಸನ್ನು ಪರಿಶುದ್ಧಗೊಳಿಸಿಕೊಳ್ಳಬೇಕೆಂಬ ಗಾಂಧಿಯ ಸತ್ವಪೂರ್ಣ ಚಿಂತನೆ ಗೌರಮ್ಮನವರ ಮೇಲೆ ಪ್ರಭಾವ ಬೀರಿದೆ. ಅವರ 'ಮನುವಿನ ರಾಣಿ' ಕಥೆಯ ವೈದ್ಯನ ಹೆಂಡತಿ ವೇಶ್ಯೆ ರಾಜಮ್ಮನ ವ್ಯಕ್ತಿತ್ವವನ್ನು ಅರಿಯದೆ, ಅವಳು ಸತ್ತರೆ ಭೂಮಿ ಭಾರ ಕಡಿಮೆಯಾಗುತ್ತದೆ ಎಂದು ಭಾವಿಸುತ್ತಾಳೆ. ಆದರೆ ಕೊನೆಗೆ ಪತ್ರದಿಂದ ರಾಜಮ್ಮ ಕಥೆ ತಿಳಿದ ಮೇಲೆ ಕಣ್ಣುಗಳೆರಡರಲ್ಲೂ ನೀರು ತುಂಬಿಕೊಂಡು, 'ನಾನೆಂಥಾ ಪಾಪಿ' ಎಂದು ಪಶ್ಚಾತ್ತಾಪ ಪಡುತ್ತಾಳೆ. ಗಾಂಧಿಯ 'ಪಶ್ಚಾತ್ತಾಪ' ಎಂಬ ಮೌಲ್ಯ ಇವತ್ತು ಕಾರ್ಯರೂಪದಲ್ಲಿಯೆ ಎಂಬ ಪ್ರಶ್ನೆ ಹಾಕಿಕೊಂಡರೆ ? ಉತ್ತರ ಬಹುಶಃ ಸೊನ್ನೆ. ಏಕೆಂದರೆ ಇತ್ತೀಚೆಗೆ ಆಂಧ್ರದ ಕರೀಂನಗರ ಜಿಲ್ಲೆಯ ಒಂದು ಹಳ್ಳಿಯಲ್ಲಿ ಗಂಡನೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿದ್ದಾಳೆ ಎಂಬ ಕಾರಣಕ್ಕಾಗಿ ಆ ಹೆಣ್ಣನ್ನು ಅಮಾನುಷವಾಗಿ ಪತ್ನಿಯೇ ಹತ್ಯೆಗೈಯುತ್ತಾಳೆ. ಇಂತಹ ಒಂದು ಕುಕೃತ್ಯಕ್ಕಾಗಿ ಅವಳಲ್ಲಿ ಪಶ್ಚಾತ್ತಾಪವಿರಲಿಲ್ಲ. ಅಷ್ಟೆ ಏಕೆ ಆ ಹೆಣ್ಣನ್ನು ವೇಶ್ಯೆಯಾಗಿಸಿದ ತನ್ನ ಗಂಡನ ತಪ್ಪು ಸಹ ಆಕೆಗೆ ಕಾಣಲಿಲ್ಲ.

ಸಮಾಜದ ಕ್ರೌರ್ಯಗಳಲ್ಲಿ ಒಂದಾದ ವರದಕ್ಷಿಣೆ ಸಮಸ್ಯೆಯನ್ನು ಅರಿಯದ ವಿದ್ಯಾವಂತ ಯುವಕರು ತಮ್ಮ ಮನಸ್ಸುಗಳಲ್ಲಿ ಸ್ವಾರ್ಥಕ್ಕೆ ಎಡೆಮಾಡಿಕೊಡುವುದರಿಂದ ಹೇಗೆ ಮುಗ್ಧ ಹೆಣ್ಣುಮಕ್ಕಳ ನೋವಿಗೆ, ಸಂಕಟಕ್ಕೆ, ಸಾವಿಗೆ ಕಾರಣರಾಗುತ್ತಾರೆ ಎಂಬುದನ್ನು 'ಆಹುತಿ' ಹಾಗೂ 'ನನ್ನ ಮದುವೆ' ಕಥೆಗಳಲ್ಲಿ ಗೌರಮ್ಮನವರು ವಿವೇಚನೆಗೊಳಪಡಿಸಿದ್ದಾರೆ. ಇಬ್ಬರೂ ನಾಯಕರು ತಾವು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುವುದರೊಂದಿಗೆ ಕಥೆಗಳು ಕೊನೆಗೊಳ್ಳುತ್ತವೆ. ಪ್ರತಿಯೊಬ್ಬ ವ್ಯಕ್ತಿ ಕೆಟ್ಟತನಕ್ಕೆ ಮನಸ್ಸಿನಲ್ಲಿ

ಎಡೆಮಾಡಿಕೊಡುವುದರಿಂದಲೇ ಅವು ಜೀವಂತವಾಗಿವೆ. ಅವುಗಳನ್ನು ದೂರೀಕರಿಸುವ ಮೂಲಕ ಸುಂದರ ಬದುಕನ್ನು ನಿರ್ಮಿಸಿಕೊಳ್ಳಬಹುದೆಂಬ ಸಂದೇಶವನ್ನು ಎರಡೂ ಕಥೆಗಳು ಸಾರುತ್ತವೆ.

ಇವತ್ತಿನ ಸಮಾಜವನ್ನು ಕಂಡರೆ ಗಾಂಧಿಯ ಎಷ್ಟೋ ವಿಚಾರಗಳು ಸಾಕಾರಗೊಂಡಿಲ್ಲವೆಂಬುದಕ್ಕೆ ಸಾಕ್ಷಿಯಾಗಿ ನಿಂತಿದೆ. ಗಾಂಧಿ ತತ್ತ್ವಗಳು ಪ್ರಾಯೋಗಿಕ ಹಂತದಲ್ಲಿ ಸೋಲುತ್ತಿರುವ ಹಿಂದಿನ ಅಂಶಗಳನ್ನು ಮನುಷ್ಯ ಅರಿತುಕೊಳ್ಳಬೇಕು. ಆ ಮೂಲಕ ಶಾಶ್ವತ ಪರಿಹಾರಗಳನ್ನು ಸೂಚಿಸುವ ಗಾಂಧೀ ವಿಚಾರಗಳು ಮುನ್ನೆಲೆಗೆ ಬರಲು ಸಾಧ್ಯವಾಗುತ್ತದೆ. ಮನುಷ್ಯ ತಪ್ಪು ಮಾಡದಿರುವುದು ಅಸಾಧ್ಯ. ಹಾಗೆಯೇ ಅದನ್ನರಿತು ಪಶ್ಚಾತ್ತಾಪ ಪಡುವುದು ಸಹ ಯಾವತ್ತಿನ ಜರೂರಾಗಿದೆ. ಸ್ವಾತಂತ್ರ್ಯ ಸಂದರ್ಭಕ್ಕಿಂತ ಗಾಂಧಿ ತತ್ತ್ವಗಳು ಇಂದಿನ ಸಮಾಜ ಅರಿಯಬೇಕಾದ ಅಗತ್ಯತೆ ಹೆಚ್ಚಿರುವುದನ್ನು ಪ್ರತಿಯೊಬ್ಬ ಮನುಷ್ಯನೂ ಮನಗಾಣಬೇಕು.

## ಸೌಂದರ್ಯ ಪರಿಕಲ್ಪನೆ

ಸೌಂದರ್ಯವನ್ನು ಕುರಿತ ಚರ್ಚೆಗಳು ಜಗತ್ತಿನಾದ್ಯಂತ ನಿರಂತರವಾಗಿ ನಡೆಯುತ್ತ ಬಂದಿವೆ. ಸೌಂದರ್ಯಮೀಮಾಂಸೆ ಎಂಬುದೇ ಒಂದು ಶಿಸ್ತಾಗಿ ರೂಪುಗೊಂಡಿದೆ. ಜಗತ್ತಿನಲ್ಲಿ ಎಷ್ಟೋ ಮಹಾನ್ ಯುದ್ಧಗಳು ಸೌಂದರ್ಯವತಿಯರಾದ ಹೆಣ್ಣುಗಳ ಕಾರಣದಿಂದ ನಡೆದಿವೆ. ಹೆಲೆನ್‌ಗಾಗಿ ಗ್ರೀಕ್ ಹಾಗೂ ಟ್ರಾಯ್ ದೇಶಗಳ ನಡುವೆ ನಡೆದ ಯುದ್ಧ. ನಮ್ಮ ದೇಶದಲ್ಲಿ ಸೀತೆಗಾಗಿ ರಾಮ – ರಾವಣರ ನಡುವೆ ನಡೆದ ಯುದ್ಧಗಳು ಇದಕ್ಕೆ ಸಾಕ್ಷೀಭೂತವಾಗಿವೆ. ಇಲ್ಲೆಲ್ಲ ಸೌಂದರ್ಯವೆಂಬುದು ಬಾಹ್ಯ ಆಕರ್ಷಣೆ ಎಂಬರ್ಥಕ್ಕೆ ಸೀಮಿತವಾಗಿದೆ.

ಸೌಂದರ್ಯ ಮೀಮಾಂಸೆಯು ಪ್ರತಿಷ್ಠಿತ ವರ್ಗದ ತೆಕ್ಕೆಯಿಂದ ಜನಸಾಮಾನ್ಯರ ನಿಲುಕಿಗೆ ಬಂದದ್ದು ತುಂಬ ತಡವಾಗಿ. ಆದರೆ ಮುಂದುವರೆದ ಘಟ್ಟದಲ್ಲಿ ಸೌಂದರ್ಯಮೀಮಾಂಸೆಯೂ ಸಾಮಾಜಿಕ ಮತ್ತು ರಾಜಕೀಯ ಶ್ರೇಣೀಕರಣಕ್ಕೆ ತಳುಕು ಹಾಕಿಕೊಂಡಿತು. ವಸಾಹತುಶಾಹಿಗಳ ಸಂದರ್ಭದಲ್ಲಂತೂ ಇದಕ್ಕೆ ಸಾಂಸ್ಕೃತಿಕ ರಾಜಕರಣದ ಸ್ವರೂಪವು ದಕ್ಕಿಬಿಟ್ಟಿತು. ಲೋಹಿಯಾರವರು 'ಸೌಂದರ್ಯ ಮತ್ತು ಮೈಬಣ್ಣ' ಲೇಖನದ ಮೂಲಕ ಕಟ್ಟಲು ಪ್ರಯತ್ನಿಸಿದ ಸೌಂದರ್ಯಮೀಮಾಂಸೆಯೂ ವಸಾಹತುಶಾಹಿಯನ್ನು ಎದರಿಸುವ ಪ್ರತಿರೋಧದ ಮಾದರಿಯೂ ಆಗಿತ್ತೆನ್ನುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

> "ಪ್ರಾಚೀನ ಭಾರತ ಮೈಬಣ್ಣ ಮತ್ತು ಚೆಲುವುಗಳನ್ನು ತೊಡರಿಕೆಯಿಲ್ಲದೆ ಬೇರಾಗಿ ನೋಡಬಲ್ಲ ಎಚ್ಚರವನ್ನು ಪ್ರಾಯಶಃ ಸಾಧಿಸಿಕೊಂಡಿತ್ತು; ಮತ್ತು ಎಂಥಲ್ಲೇ ಇದ್ದ ಚೆಲುವನ್ನು ಕಾಣಬಲ್ಲ ಶಕ್ತಿಯನ್ನು ಸಿದ್ಧಿಸಿಕೊಂಡಿತ್ತು. ಊಹಿಸಲು ಬರುವಂತೆ ಕೆಲವು ಕಾಲಗಳಲ್ಲಾದರೂ ಈ ದೇಶ, ಬಣ್ಣದ ಕಪ್ಪು–ಬಿಳುಪುಗಳ ಬಗ್ಗೆ ಪೂರ್ವಾಗ್ರಹ ಬಿಟ್ಟು, ಅದರ ತೊಡಕಿಲ್ಲದ ಸೌಂದರ್ಯವನ್ನು ತೂಗಿ ನೋಡಬಲ್ಲ ಶಕ್ತಿ ಪಡೆದುಕೊಂಡಿತ್ತು. ಮುಂದಿನ ಪೀಳಿಗೆಗಳು ಸೌಂದರ್ಯಾನುಭವದ ಈ ವಿಶೇಷ ಪ್ರಬುದ್ಧತೆಯನ್ನು ಹೇಗೋ ಪೋಲು ಮಾಡಿಕೊಂಡುಬಿಟ್ಟವು."[೮]

ಎಂಬ ವಿಚಾರವನ್ನು ಲೋಹಿಯಾರವರು ಬಹಳ ವಿಷಾದದಿಂದ ಹೇಳುತ್ತಾರೆ. ಅಷ್ಟೇ ಅಲ್ಲ ಭಾರತೀಯರು ಕಪ್ಪುವರ್ಣಕ್ಕೆ ನೀಡಿದ್ದ ಪ್ರಾಧಾನ್ಯತೆಯನ್ನು ಅವರು ಗುರುತಿಸುತ್ತಾರೆ.

“ಭಾರತೀಯ ಪುರಾಣ ಕಲ್ಪನೆಯಲ್ಲಿ ಪರಿಮಳ ಸೂಸುವಂಥ ತುಂಬ ಚೆಲುವಾದ ಎರಡು ಪುಷ್ಪಗಳು ಕೃಷ್ಣ ಮತ್ತು ಕೃಷ್ಣೆ; ಒಬ್ಬ ಗಂಡಸು, ಇನ್ನೊಬ್ಬಳು ಹೆಂಗಸು; ಇಬ್ಬರೂ ಕಪ್ಪು”[೬]

ಎಂದು ಅಭಿಪ್ರಾಯಪಡುತ್ತಾರೆ. ಮನುಷ್ಯ ಜಗತ್ತಿನ ವಿಶಾಲ ಮನೋಭಾವ ಜ್ಞಾನವನ್ನು ಪಡೆಯುತ್ತ ಹೆಚ್ಚೆಚ್ಚು ಸಂಕುಚಿತಗೊಂಡದ್ದನ್ನು ಲೋಹಿಯಾರವರು ದಾಖಲಿಸುತ್ತಾರೆ.

ಮೈಬಣ್ಣಕ್ಕೆ ಪ್ರಾಮುಖ್ಯತೆಯನ್ನು ಕೊಡುವ ಸೌಂದರ್ಯಕಲ್ಪನೆ ನಮ್ಮಲ್ಲಿ ಹೆಚ್ಚು ಪ್ರಚುರಗೊಂಡ ಪರಿಣಾಮದಿಂದ ಹೆಣ್ಣಿನ ಬದುಕಿನಲ್ಲಿ ವರದಕ್ಷಿಣೆಯಷ್ಟೇ ಜ್ವಲಂತ ಸಮಸ್ಯೆಯಾಗಿ ಸೌಂದರ್ಯವು ಮಾರ್ಪಟ್ಟಿತು. ಸೌಂದರ್ಯವಿಲ್ಲದವರು ಮದುವೆಗೆ ಅನರ್ಹರು ಎನ್ನುವಂತೆ ಸಮಾಜ ಕಾಣಲು ಆರಂಭಿಸಿತು. ಸೌಂದರ್ಯವತಿಯರಲ್ಲದವರಿಗೆ ಮದುವೆಯಾಗುವುದು ಸಹ ಪೂರ್ವಾರ್ಜಿತ ಪುಣ್ಯವೆಂದು ಭಾವಿಸಲಾಯಿತು. ಗೌರಮ್ಮನವರ ‘ಅವಳ ಭಾಗ್ಯ’ ಎಂಬ ಕಥೆಯಲ್ಲಿ ಇದರ ಚಿತ್ರಣವಿದೆ.

“ಹೌದು ಅವಳಿಗೆ ಮದುವೆಯಾಯಿತು. ಆ ಕುರೂಪಿಗೆ ಯೋಗ್ಯನಾದ ವರನೆಲ್ಲಿ ದೊರೆಯಬೇಕು ಹೇಳು. ಅದೂ ವರದಕ್ಷಿಣೆ ಒಂದು ಕಾಸೂ ಇಲ್ಲದೆ. ಅದೇನೋ ಅವಳ ಪೂರ್ವಜನ್ಮದ ಸುಕೃತ. ಅದೇ ಸ್ವಲ್ಪ ಕ್ಷಯದವನಾದರೂ ಊಟ ಬಟ್ಟೆಗಳಿಗೆ ಕೊರತೆ ಇಲ್ಲದಷ್ಟು ಇರುವಾತ. ಎರಡೂ ಖರ್ಚನ್ನೂ ವಹಿಸಿಕೊಂಡು ಅವಳನ್ನು ಮದುವೆಯಾದ. ಗಂಡನ ಮನೆಯಲ್ಲಿ ಅತ್ತೆ ಮಾವ ಯಾರೂ ಇಲ್ಲ. ಗಂಡನನ್ನು ಸ್ವಲ್ಪ ಆರೈಕೆ ಮಾಡಿಕೊಂಡಿದ್ದರೆ ಸರಿ. ಉಂಡುಟ್ಟು ಸುಖವಾಗಿರಲು ಯಾವ ತೊಂದರೆಯೂ ಇಲ್ಲ. ನಿಜವಾಗಿಯೂ ಪಾರು ಭಾಗ್ಯಶಾಲಿನಿ. . .”[೭]

ನಮ್ಮ ಸಮಾಜ ಸೌಂದರ್ಯವೇ ಹೆಣ್ಣುಮಕ್ಕಳ ದೈಹಿಕ, ಮಾನಸಿಕ, ಶಕ್ತತೆಗಳಿಗಿಂತ ಮಿಗಿಲು ಎಂದು ಭಾವಿಸುತ್ತಿದೆ. ಸೌಂದರ್ಯವಿಲ್ಲದವಳನ್ನು ಕ್ಷಯರೋಗದ ವ್ಯಕ್ತಿಯೊಬ್ಬ ಮದುವೆಯಾದರೆ ಅದು ಅವಳ ಭಾಗ್ಯವಾಗುತ್ತದೆಯೇ ಹೊರತು ಅವಳ ಜೀವನ ದುರಂತವಲ್ಲವೆಂದು ಭಾವಿಸುತ್ತದೆ. ಸಮಾಜದ ಈ ಕ್ರೂರತೆ ವಾಕರಿಕೆ ಬರಿಸುತ್ತದೆ. ಇದೇ ಕಥೆಯಲ್ಲಿ ಪಾರುವಿನ ಸಂಗೀತಕ್ಕೆ ಮಾರುಹೋದ ಜಮೀನುದಾರನ ಅಳಿಯ ಕಿಟ್ಟಣ್ಣ ಈ ರೀತಿ ಯೋಚಿಸುತ್ತಾನೆ.

“ಅವಳ ಈ ಸೌಂದರ್ಯದಿಂದ ತುಂಬಿದ ಹೃದಯದ ಕನ್ನಡಿಗಳಂತಿದ್ದ ಈ ಎರಡು ಕಣ್ಣುಗಳೇ ಸಾಲವೆ? ಆ ಸರ್ವಸಾಮಾನ್ಯ ಮುಖಕ್ಕೆ ಸ್ವರ್ಗೀಯ ಸೌಂದರ್ಯವನ್ನು ಕೊಟ್ಟ ಆ ಕಣ್ಣುಗಳನ್ನು ನೋಡದೆ ಅವಳು ಕುರೂಪಿ ಎಂದಂದುಕೊಂಡಿದ್ದೆನಲ್ಲ – ಎಂತಹ ಆಕ್ಷಮ್ಯ ಮೂಢತನ !

ಬಿಳಿಚರ್ಮ, ಉದ್ದವಾದ ಕೇಶರಾಶಿ, ಎಳಸು ಮೂಗು, ಚೆಂದುಟಿಗಳು – ಇವೆಲ್ಲಾ ಇದ್ದರೇನೇ ಸೌಂದರ್ಯವೆಂದಿದ್ದ ನನ್ನ ಭಾವನೆ ಕ್ಷಣಮಾತ್ರದಲ್ಲಿ ಬದಲಾಯ್ತು. ಸುಂದರವಲ್ಲದ ರೂಪದ ಒಳಗೂ ಅತ್ಯಂತ ಸುಂದರವಾದ ಹೃದಯಗಳಿರುವುವು ಎಂಬುದನ್ನು ಪಾರುವಿನ ಕಣ್ಣುಗಳು ನನಗೆ ತೋರಿಸಿಕೊಟ್ಟವು. ಮತ್ತೆ ಆ ಸುಂದರವಾದ ಹೃದಯ. ರೂಪಸೌಂದರ್ಯದಂತೆ ಬಹು ಬೇಗನೆ ಮಾಸದೆ ಎಂದೆಂದೂ ಸುಂದರವಾಗಿಯೇ ಇರುವುದು ಎಂಬುದರ ಅರಿವನ್ನು ನನಗೆ ಮಾಡಿಕೊಟ್ಟವು. ಪಾರುವಿನ ಆ ಕಣ್ಣುಗಳೇ"[೭]

ಇದೇ ರೀತಿ 'ಕೌಸಲ್ಯಾನಂದನ' ಕಥೆಯ ಲಿನ್ನಿಯನ್ನು ಕುರಿತು ಅವಳ ಸ್ನೇಹಿತೆ ಸೀತೆ ಹೇಳುವ ಮಾತುಗಳನ್ನು ನೋಡಿ,

"ನೋಡುವುದಕ್ಕೆ ಸುಂದರಿಯಲ್ಲದಿದ್ದರೂ ಅವಳ ಸ್ವರ ಬಹಳ ಇಂಪು. ಪ್ರಾರ್ಥನೆಯ ಸಮಯದಲ್ಲಿ ಅವಳು ಹಾಡುವುದನ್ನು ಕೇಳುವುದಕ್ಕಾಗಿ ಜ್ವರಬಂದ ಹುಡುಗಿಯರು ಸಹ ಹಾಜರಾಗುತ್ತಿದ್ದರು. ಅಷ್ಟು ಇಂಪು ಅವಳ ಸ್ವರ"[೮]

ಗೌರಮ್ಮನವರ ಎಲ್ಲ ಕಥೆಗಳ ನಾಯಕಿಯರು ಸಮಾಜ ಒಪ್ಪಿರುವ ಬಿಳಿವರ್ಣದ, ಚೆಂದುಟಿಗಳ, ಸೌಂದರ್ಯವತಿಯರಲ್ಲ. ಅವರುಗಳ ನಿಜವಾದ ಸೌಂದರ್ಯವಿರುವುದು ಹೃದಯವೈಶಾಲ್ಯದಲ್ಲಿ. ಪ್ರೀತಿ ತುಂಬಿದ ಕಣ್ಣುಗಳಲ್ಲಿ ಹಾಗೂ ನಿಷ್ಕಪಟ ಮನಸ್ಸಿನಲ್ಲಿ. ಬಾಹ್ಯ ಸೌಂದರ್ಯ ಕ್ಷಣಿಕವಾದುದು. ಅಂತರಂಗದ ಸೌಂದರ್ಯವೇ ಶಾಶ್ವತವಾದದ್ದು. ಆದ್ದರಿಂದ ಪ್ರತಿಯೊಬ್ಬ ಮನುಷ್ಯನು ಶಾಶ್ವತ ಸೌಂದರ್ಯದತ್ತ ತುಡಿಯುವುದೇ ಸರಿಯಾದದ್ದು ಎಂಬ ನಿಲುವನ್ನು ಗೌರಮ್ಮನವರ ಕಥೆಗಳು ಮಂಡಿಸುತ್ತವೆ. ಈ ವಿಚಾರದ ಹಿಂದೆ ಗಾಂಧಿತತ್ತ್ವಗಳು ಕ್ರಿಯಾತ್ಮಕವಾಗಿ ಕೆಲಸ ಮಾಡಿವೆ. ಏಕೆಂದರೆ ಬಾಹ್ಯಸೌಂದರ್ಯಕ್ಕಿಂತ ಅಂತರಂಗದ ಶಕ್ತಿಯೇ ಮುಖ್ಯ ಎಂದು ತಮ್ಮ ನಡೆ–ನುಡಿಗಳಿಂದ ಜಗತ್ತಿಗೆ ತೋರಿಸಿಕೊಟ್ಟ ಧೀಮಂತ ವ್ಯಕ್ತಿ ಗಾಂಧಿ. ತಾನು ಬದುಕಿದ್ದೂ ಸರಳವಾಗಿ, ಸತ್ವಯುತವಾಗಿ, ಬೇರೆಯವರಿಂದ ಬಯಸಿದ್ದು ಸರಳ ನೇರ ನಡೆನುಡಿಯ ಸತ್ವಯುತ ಬದುಕನ್ನು. 'ಜೀವನ ಪ್ರೀತಿ' ಕಥಾಸಂಕಲನದ ಎಲ್ಲಾ ಕಥೆಗಳು ಒಂದಿಲ್ಲೊಂದು ರೀತಿಯಲ್ಲಿ ದೇಹಮೂಲ ನಿರ್ವಚನದ ಸೌಂದರ್ಯ ಕಲ್ಪನೆಯನ್ನು ವ್ಯಕ್ತಿತ್ವಮೂಲ ನಿರ್ವಚನಕ್ಕೆ ಒಳಪಡಿಸುತ್ತಿರುವುದರ ಕಡೆಗೆ ತುಡಿಯುವುದನ್ನು ಕಾಣಬಹುದು. ಸಾಂಪ್ರದಾಯಿಕ ಸೌಂದರ್ಯ ಮೀಮಾಂಸೆಗಿಂತ ಭಿನ್ನವಾದ ದೇಹಮೂಲ ನಿರ್ವಚನೆಯ ಆಚೆಗೆ ಹೆಣ್ಣಿನ ಸೌಂದರ್ಯವನ್ನು, ಆತ್ಮ ಸೌಂದರ್ಯವನ್ನು ಗೌರಮ್ಮನವರು ಕಟ್ಟಿಕೊಂಡರು.

## ಅಡಿಟಿಪ್ಪಣಿ

೧. 'ಒಂದು ಪುಟ್ಟ ಚಿತ್ರ' – 'ಜೀವನ ಪ್ರೀತಿ' – ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೩೨

೨. 'ಪುನರ್ವಿವಾಹ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೨೮

೩. 'ಹಿಂದ್ ಸ್ವರಾಜ್ಯ' – ಮೋಹನ್‌ದಾಸ್ ಕರಮ್‌ಚಂದ್ ಗಾಂಧಿ, ಗಾಂಧಿ ಸ್ಮಾರಕ ನಿಧಿ, ಪುಟ–೯೭

೪. 'ಉತ್ತರ – ದಕ್ಷಿಣ' – ರಾಮ ಮನೋಹರ ಲೋಹಿಯಾ ಬರಹಗಳು. ಸಂಪುಟ ೨, ಪುಟ–೩೨೭

೫. ಉತ್ತರ – ದಕ್ಷಿಣ' – ರಾಮ ಮನೋಹರ ಲೋಹಿಯಾ ಬರಹಗಳು. ಸಂಪುಟ ೨, ಪುಟ–೩೨೭

೬. 'ಅವಳ ಭಾಗ್ಯ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೩೮

೭. 'ಅವಳ ಭಾಗ್ಯ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೩೭

೮. 'ಕೌಸಲ್ಯಾನಂದನ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೪೦

# ೫. ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಜಾತಿ, ಮತಾಂತರ ಜಿಜ್ಞಾಸೆ

ಜಾತಿ – ಮತ – ಧರ್ಮಗಳು ಮನುಷ್ಯನ ಜೀವನವನ್ನು, ಬದುಕನ್ನು ನಿರ್ಧರಿಸುವ ಅಂಶಗಳಾಗಿ ಮಾರ್ಪಟ್ಟಿವೆ. ಅಲೆಮಾರಿ ಬದುಕನ್ನು ಬಿಟ್ಟು ಒಂದೆಡೆ ನೆಲೆನಿಂತ ಮಾನವ ಶ್ರಮವಿಭಜನೆಯ ಆಧಾರದ ಮೇಲೆ ಸಮಾಜದಲ್ಲಿ ಸುವ್ಯವಸ್ಥೆಯನ್ನು ತರುವ ಸಲುವಾಗಿ ವರ್ಗಗಳನ್ನು ನಿರ್ಮಾಣ ಮಾಡಿದ. ಮುಂದೆ ಈ ವರ್ಗಗಳೇ ಜಾತಿಗಳಾಗಿ ಮಾರ್ಪಾಟ್ಟಾಗಿ ಸಮಾಜದಲ್ಲಿ ಕೋಮು – ಗಲಭೆಗಳನ್ನು ಹೆಚ್ಚಿಸುತ್ತಿರುವುದು ಅಪರ ದುರಂತವಾಗಿದೆ. ಬಹುಶಃ ಇದಕ್ಕೆ ಕಾರಣ ಜನರಲ್ಲಿ ಹೆಚ್ಚುತ್ತಿರುವ ಪಾವಿತ್ರ್ಯರಕ್ಷಣೆಯ ಕಾಳಜಿಯೇ ಆಗಿದೆ. ಎಷ್ಟೋ ಸಂದರ್ಭಗಳಲ್ಲಿ ಜಾತಿ–ಮತಾಂತರಗಳು ಹಲವು ಸವಲತ್ತುಗಳನ್ನು, ಅಧಿಕಾರವನ್ನು, ಸ್ಥಾನಮಾನಗಳನ್ನು, ಉತ್ತಮ ಬದುಕನ್ನು ನೀಡುವಲ್ಲಿ, ಪ್ರಮುಖ ಪಾತ್ರ ವಹಿಸುತ್ತಿದೆ. ಸ್ವಾತಂತ್ರ್ಯ ನಂತರ 'ಜಾತಿ' ಎಂಬುದು ಇಷ್ಟೊಂದು ಮಹತ್ತ್ವವನ್ನು ಪಡೆಯುತ್ತಿರುವುದರ ಹಿಂದಿನ ಸಂಗತಿಗಳಾವುವು? ಎಂಬುದು ಚಿಂತಿಸಬೇಕಾದ ಆಧುನಿಕ ಕಾಲದ ಗಂಭೀರ ಸವಾಲಾಗಿದೆ.

ಮಾನವ ಚರಿತ್ರೆಯನ್ನು ಗಮನಿಸಿದಾಗ ಜಾತಿ, ಮತಾಂತರಗಳು ಪ್ರಮುಖ ಸ್ಥಾನವನ್ನು ಪಡೆದುಕೊಂಡಿರುವುದು ಇತಿಹಾಸದುದ್ದಕ್ಕೂ ನಿರಂತರವಾಗಿ ಕಂಡುಬರುತ್ತದೆ. ವೈದಿಕ ಧರ್ಮಕ್ಕೆ ಪ್ರತಿಸ್ಪರ್ಧಿಯಾಗಿ ಬೌದ್ಧ, ಜೈನಧರ್ಮಗಳು ನಮ್ಮಲ್ಲಿ ಕಂಡುಬರುತ್ತವೆ. ಅಶೋಕನಂತಹ ರಾಜ ಬೌದ್ಧಧರ್ಮಕ್ಕೆ ಮತಾಂತರಗೊಳ್ಳುತ್ತಾನೆ. ಪಂಪನ ತಂದೆಯೂ ಸಹ ೧೦ನೆಯ ಶತಮಾನದಲ್ಲಿ ಜೈನಧರ್ಮಕ್ಕೆ ಸೇರುತ್ತಾನೆ. ಆಗಿನ ಕಾಲದಲ್ಲಿ ಎಷ್ಟೋ ಮಂದಿ ರಾಜನ ಹಿಂಬಾಲಕರಾಗಿದ್ದು ರಾಜ ಸ್ವೀಕರಿಸಿದ ಧರ್ಮವನ್ನು ತಾವು ಸ್ವೀಕರಿಸುತ್ತಿದ್ದರು. ಕೆಲವು ಸಲ ಮತಾಂತರ ಸ್ವಇಚ್ಛೆಯಿಂದ ನಡೆಯುತ್ತಿದ್ದರೆ, ಎಷ್ಟೋ ಸಲ ಒತ್ತಾಯದಿಂದ ನಡೆಯಲ್ಪಡುತ್ತಿದ್ದವು. ಮಾಸ್ತಿಯವರ 'ಡೊಬಾಯಿ ಪಾದ್ರಿಯ ಒಂದು ಪತ್ರ' ಇದಕ್ಕೆ ನಿದರ್ಶನವನ್ನೊದಗಿಸುತ್ತದೆ. ಟಿಪ್ಪುಸುಲ್ತಾನನ ಆಡಳಿತದ ಕಾಲದಲ್ಲಿ ಎಷ್ಟೋ ಅಧಿಕಾರಿಗಳು ತಮ್ಮ ಶಕ್ತಿ–ಯುಕ್ತಿಗಳನ್ನು ಬಳಸಿಕೊಂಡು ಹಿಂದೂಗಳನ್ನು ಮುಸ್ಲಿಂ ಧರ್ಮಕ್ಕೆ ಸೇರಿಸಿಕೊಳ್ಳುತ್ತಿದ್ದರು. ಈ ರೀತಿ ಮತಾಂತರಕ್ಕೊಳಗಾದ ಮಂದಿಯನ್ನು ಯಾವುದೇ ಕಾರಣಕ್ಕೂ ಹಿಂದೂಧರ್ಮ ಮರಳಿ ಸ್ವೀಕರಿಸುತ್ತಿರಲಿಲ್ಲ. ಇದರಿಂದಾಗಿ ಇಷ್ಟವಿರಲಿ, ಇಲ್ಲದಿರಲಿ ಮತಾಂತರಗೊಂಡ ಧರ್ಮದಲ್ಲಿ ಶಾಶ್ವತವಾಗಿ ಉಳಿಯಬೇಕಾಗಿತ್ತು.

ಇವುಗಳಿಗಿಂತ ಭಿನ್ನವಾದ ಮತಾಂತರ ಪ್ರಕಿಯೆ ಹನ್ನೆರಡನೆಯ ಶತಮಾನದ ವಚನಸಾಹಿತ್ಯದ ಸಂದರ್ಭದಲ್ಲಿ ಕಂಡುಬರುತ್ತದೆ. ದೇವರು, ಭಕ್ತಿ ಎಂಬ ಪರಿಕಲ್ಪನೆಯಡಿಯಲ್ಲಿ ಜಾತಿಯ

ಕ್ರೂರಪದ್ಧತಿಗಳಿಂದ ಮುಕ್ತಿ ಪಡೆಯುವ ಸಲುವಾಗಿ ಸಾವಿರಾರು ಮಂದಿ ಶಿವಭಕ್ತರಾಗುತ್ತಾರೆ. ಭಕ್ತರೆಲ್ಲ ಒಂದೇ ಜಾತಿಯೆಂಬ ತತ್ತ್ವದ ಬದ್ಧರಾದ ಕಾಣದಿಂದಾಗಿ ಬಸವಣ್ಣನವರ ನೇತೃತ್ವದಲ್ಲಿ ದೊಡ್ಡ ಕ್ರಾಂತಿಯೋಪಾದಿಯಲ್ಲಿ ಈ ಮತಾಂತರ ನಡೆಯಿತು. ಈ ಮತಾಂತರದ ಹಿಂದೆ ಯಾವುದೋ ಒತ್ತಾಯವಾಗಲೀ, ಆಮಿಷವಾಗಲೀ ಇಲ್ಲದಿರುವುದೆ ಅದರ ವೈಶಿಷ್ಟ್ಯವನ್ನು ಎತ್ತಿಹಿಡಿಯುವ ಸಂಗತಿಯಾಗಿದೆ.

ಹತ್ತೊಂಬತ್ತು ಹಾಗೂ ಇಪ್ಪತ್ತನೆಯ ಶತಮಾನಗಳಲ್ಲಿ ಆಂಗ್ಲರ ಆಗಮನದಿಂದಾಗಿ ಇವುಗಳಿಗಿಂತ ಭಿನ್ನವಾದೊಂದು ಮತಾಂತರ ಪ್ರಕ್ರಿಯೆ ಕಾಣಿಸಿಕೊಂಡಿತು. ಬಡಜನರಿಗೆ 'ಭೂಮಿ'ಯನ್ನು ನೀಡುವ ಆಮಿಷವೊಡ್ಡಿ, ಶ್ರೀಮಂತರಿಗೆ ಆಧುನಿಕತೆಯ ರುಚಿ ತೋರಿಸಿ ತಮ್ಮ ಮತಕ್ಕೆ ಸೇರುವಂತೆ ಉತ್ತೇಜಿಸಲಾಗುತ್ತಿತ್ತು. ಇನ್ನು ಕೆಲಸ ಸಂದರ್ಭಗಳಲ್ಲಿ 'ಹೆಣ್ಣು' ಹಾಗೂ 'ಪ್ರೀತಿ' ಮತಾಂತರ ಕಾರಣವಾಗಿರುವುದನ್ನು ಕಾಣಬಹುದು. ಕುವೆಂಪುರವರ 'ಕ್ರಿಸ್ತನಲ್ಲ ಪಾದ್ರಿಯ ಮಗಳು' ಎಂಬ ಕಥೆ ಇದಕ್ಕೆ ನಿದರ್ಶನವಾಗಿದೆ. ಈ ಕಥೆಯ ಕಥಾನಾಯಕ ಮತಾಂತರ ತೀವ್ರ ವಿರೋಧಿಯಾಗಿರುತ್ತಾನೆ. ಮತಾಂತರದ ತಂತ್ರಗಳನ್ನು ಪ್ರತಿಭಟಿಸುತ್ತಿರುತ್ತಾನೆ. ಆದರೆ ಕ್ರೈಸ್ತ ಹೆಣ್ಣುಮಗಳ ಪ್ರೀತಿಯನ್ನು ಪಡೆಯುವ ಸಲುವಾಗಿ ಮತಾಂತರಗೊಂಡು ಕೊನೆಯವರೆಗೂ ಅಜ್ಞಾತನಾಗಿ ಜೀವನ ಸಾಗಿಸುತ್ತಾನೆ. ಪ್ರಜ್ಞಾಪೂರ್ವಕವಾಗಿ ಮತಾಂತರ ಪ್ರಕ್ರಿಯೆಯನ್ನು ಪ್ರತಿಭಟನೆಯ ನೆಲೆಯಲ್ಲಿ ವಿರೋಧಿಸಿದರೂ ಜೀವನದ ಪ್ರಾಯೋಗಿಕ ಹಂತದಲ್ಲಿ ಅದರ ನಿಷ್ಠುರ ನಿರಾಕರಣೆ ಸಾಧ್ಯವೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಮತಾಂತರವೆಂಬ ಸವಾಲನ್ನು ವಿಶ್ಲೇಷಣೆಗೊಳಪಡಿಸಿರುವ ನವೋದಯದ ಪ್ರಮುಖ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು' ಹಾಗೂ 'ಚೋಮನ ದುಡಿ'ಗಳು ನಿರೂಪಣ ತಂತ್ರದಿಂದ ಸಾಕಷ್ಟು ಮಹತ್ವ ಗಳಿಸಿವೆ. ದೇವಯ್ಯನಂತಹ ಯುವಕನನ್ನು ತನ್ನ ಧರ್ಮಕ್ಕೆ ಸೆಳೆಯಲು ಪಾದ್ರಿ ಆಧುನಿಕತೆಯ ಆಮಿಷವೊಡ್ಡುತ್ತಾನೆ. ಸ್ವಂತ ಭೂಮಿ ಕಾಣದ ಚೋಮನಿಗೆ ಉಳುಮೆಗಾಗಿ ಭೂಮಿ ನೀಡುವ ಆಸೆಯೊಡ್ಡುತ್ತಾರೆ. ಇಂತಹ ಆಕರ್ಷಣೆಗಳಿಗೆ ಅವರುಗಳು ಒಳಗಾಗುವುದು ಸಹಜವೇ ಆಗಿದೆ. ಏಕೆಂದರೆ ದೇವಯ್ಯನಂತಹ ಯುವಕನಿಗೆ ತನ್ನ ಜಾತಿಯಲ್ಲಿನ ಕೊಳಕು, ಒರಟುತನ, ಮೂಢನಂಬಿಕೆಗಳ ಪರಮಾವಧಿಯ ಬದಲಾಗಿ ಪಾದ್ರಿಯ ಸ್ವಚ್ಛತೆ, ಶುಭ್ರತೆ, ಕ್ರಾಪು, ಬೈಸಿಕಲ್ಲು, ಗಡಿಯಾರ, ಕಾಫಿ ಹೆಚ್ಚು ಆಕರ್ಷಣೀಯವಾಗಿ ಕಾಣುವುದು ಅಸಹಜವಲ್ಲ. ಆದ್ದರಿಂದಲೇ ಕುವೆಂಪುರಿಗೆ ಮತಾಂತರವನ್ನು ಒಂದು ಆಕರ್ಷಣೆಯ ಪರಿಕಲ್ಪನೆಯಾಗಿ ಚಿತ್ರಿಸಲು ಸಾಧ್ಯವಾಯಿತು. ದಲಿತರ ನೋವಿಗೆ ಸ್ಪಂದಿಸುವ ಕಾರಂತರಿಗೆ ಚೋಮನ ಉಳುಮೆಯ ಆಸೆಗೆ ಭೂಮಿಯನ್ನು ನೀಡಲಾಗದ ಮೇಲ್ವರ್ಗದ ಸಂಕಪ್ಪಯ್ಯನಿಗಿಂತ ಭೂಮಿ

ನೀಡುವ ಕ್ರೈಸ್ತ ಪಾದ್ರಿ ಒಳ್ಳೆಯವನಾಗಿ ಕಾಣುತ್ತಾನೆ. ದೇವಯ್ಯ ಹಾಗೂ ಚೋಮ ಮತಾಂತರಕ್ಕೆ ಆಕರ್ಷಿತರಾದರೂ ಅದಕ್ಕೆ ಒಳಗಾಗದೆ ಉಳಿಯುತ್ತಾರೆ. ಏಕೆಂದರೆ ಆಕರ್ಷಣೆ, ಆಗುಪಿಕೆಯಲ್ಲಿ ಕೊನೆಗೊಳ್ಳಬೇಕಾದ ಅಗತ್ಯವಿಲ್ಲ. ಹಾಗೆಯೇ ಆಕರ್ಷಣೆಗೆ ಒಳಪಡದಿರುವುದು ಅಸಂಭವ.

ಸ್ವಾತಂತ್ರ್ಯಪೂರ್ವ ವಸಾಹತುಶಾಹಿ ಸಂದರ್ಭದಲ್ಲಿ ಆಧುನಿಕತೆಯ ಆಕರ್ಷಣೆಗೊಳಗಾಗಿ, ಭೂಮಿಯ ಆಸೆಗಾಗಿ ಮತಾಂತರಗಳು ನಡೆದರೆ ಸ್ವಾತಂತ್ರ್ಯ ನಂತರ ಆತ್ಮತೃಪ್ತಿಗಾಗಿ, ಐಡೆಂಟಿಟಿಗಾಗಿ, ಸಮಾಜದಲ್ಲಿ ನೆಮ್ಮದಿಯ ಬದುಕನ್ನು ಕಂಡುಕೊಳ್ಳುವ ಸಲುವಾಗಿ ಮತಾಂತರಗಳು ನಡೆಯುತ್ತಿವೆ. 'ಜಾತಿ' ವಿನಾಶಕ್ಕೆ ಯೋಗ್ಯವಾದದ್ದು ಎಂಬ ಸಂದೇಶವನ್ನು ನೀಡಿದಂತಹ ಅಂಬೇಡ್ಕರ್‌ಗೆ ಬೌದ್ಧಧರ್ಮಕ್ಕೆ ಸೇರುವ ಅನಿವಾರ್ಯತೆ ಏಕೆ ಉಂಟಾಗುತ್ತದೆ? ದಲಿತ-ಬಂಡಾಯ ಚಳವಳಿಯ ಸಂದರ್ಭದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ದಲಿತರ ಜೀವನದ ಅನನ್ಯತೆಯನ್ನು ಅನಾವರಣ ಮಾಡಿದ ದೇವನೂರು ಮಹಾದೇವರವರು ಕಳೆದ ವರ್ಷ ಬೌದ್ಧಧರ್ಮಕ್ಕೆ ಸೇರಲು ಕಾರಣವೇನು? ಗಾಂಧಿ ಅಸ್ಪೃಶ್ಯತೆಯ ನಿವಾರಣೆಗಾಗಿ ಹೇಳಿದ 'ಹರಿಜನ' ಎಂದರೆ ದೇವರ ಮಕ್ಕಳೆಂಬ ವಿಚಾರವಾಗಲೀ, ಶೌಚಾಲಯಗಳನ್ನು ಸ್ವಚ್ಛಗೊಳಿಸುವ ಮೂಲಕ ಎಲ್ಲ ಮನುಷ್ಯರು ಹೇಗೆ ತಮ್ಮ ಮನಸ್ಸುಗಳನ್ನು ಪರಿಶುದ್ಧಗೊಳಿಸಿಕೊಳ್ಳಬೇಕೆಂಬ ಸುಧಾರಣವಾದಿ ವಿಚಾರಗಳಾಗಲೀ ಪ್ರಯೋಗಿಕ ಹಂತದಲ್ಲೇ ಕಾರ್ಯರೂಪಕ್ಕೆ ಬರದೆ ಉಳಿದಿರುವುದೇ ಮತಾಂತರಗಳಿಗೆ ಕಾರಣವಿರಬಹುದೆ? ಪ್ರಜಾಪ್ರಭುತ್ವ ಸರ್ಕಾರ ಸ್ವಾತಂತ್ರ್ಯ ನಂತರ ನೀಡಿದ ಶಿಕ್ಷಣ ಜನರಲ್ಲಿ ಜಾತಿಯ ಅರಿವನ್ನು ಅಳಿಸುತ್ತಿದೆಯೇ? ಅಥವಾ ಉಳಿಸುತ್ತಿದೆಯೋ? ಕೆಳವರ್ಗದರು ಇಂದಿಗೂ ತಮ್ಮ ಜಾತಿಗಳಲ್ಲೇ ಉಳಿದು ಗೌರವಯುತವಾಗಿ ಸಮಾಜದಲ್ಲಿ ಬದುಕಲು ಕಷ್ಟವಾಗುತ್ತಿರುವುದರ ಹಿಂದಿನ ಹುನ್ನಾರಗಳಾವುವು? ಬುದ್ಧ, ಮಹಾವೀರ, ಬಸವಣ್ಣ, ಗಾಂಧಿ, ಅಂಬೇಡ್ಕರ್ ಎಲ್ಲರೂ ನಂಬಿದ್ದ 'ಅಹಿಂಸೆಯೇ ಪರಮ ಧರ್ಮ' ಎಂಬ ವಿಚಾರಗಳನ್ನು ಮೂಲಭೂತವಾದಿಗಳು ಗಾಳಿಗೆ ತೂರುವ ಮೂಲಕ ಸ್ವಾರ್ಥಯುತವಾಗಿ ಧರ್ಮಗಳನ್ನು ಹೆಚ್ಚೆಚ್ಚು ಜಾಗೃತಗೊಳಿಸುತ್ತಿರುವುದರ ಹಿಂದಿನ ಸಂಚುಗಳಾವುವು? ಇವೆಲ್ಲ ಇಂದು ಚರ್ಚೆಗೆ ಗ್ರಾಸವಾಗಬೇಕಾದ, ಅರಿವಿನ ಮಂಥನಕ್ಕೆ ಒಳಪಡಬೇಕಾದ ವಿಚಾರಗಳಾಗಿವೆ.

ನವೋದಯ ಸಾಹಿತ್ಯ ಸಮಾಜದ ಹಲವು ಸವಾಲುಗಳನ್ನು ತನ್ನ ವಸ್ತುವಾಗಿಸಿಕೊಳ್ಳುವ ಮೂಲಕ ಅವುಗಳೊಂದಿಗೆ ಮುಖಾಮುಖಿಯಾಗುತ್ತ ಹಲವು ಪರಿಹಾರಗಳನ್ನು ಉದಾರತಾ ಮನೋಧರ್ಮದೊಂದಿಗೆ ಕಂಡುಕೊಂಡಿತು. ಇಂತಹ ಸಂದರ್ಭದಲ್ಲೇ ಕಾಣಿಸಿಕೊಂಡ ಮಹಿಳಾ ಲೇಖಕಿ ಕೊಡಗಿನ ಗೌರಮ್ಮ ಪುರುಷ ಲೇಖಕರು ತಮ್ಮ ಸಾಹಿತ್ಯದ ಸವಾಲಾಗಿಸಿಕೊಂಡ ಜಾತಿ,

ಮತಾಂತರಗಳನ್ನು ದಿಟ್ಟವಾಗಿ ತಮ್ಮ ಕಥಾಸಾಹಿತ್ಯದಲ್ಲಿ ವಿಶ್ಲೇಷಣೆಗೊಳಪಡಿಸಿದ್ದಾರೆ. ಮೊದಲ ತಲೆಮಾರಿನ ಲೇಖಕಿಯೊಬ್ಬರು ಮಹತ್ವದ ಸಾಮಾಜಿಕ ಸಮಸ್ಯೆಯೊಂದನ್ನು ತಮ್ಮ ಕಥೆಗಳಲ್ಲಿ ಮಂಥನಕ್ಕೆ ಒಳಪಡಿಸಿರುವುದು ಅವರ ವೈಚಾರಕತೆಯನ್ನು ಸೂಚಿಸುತ್ತದೆ. ಇಡೀ ಸಮಾಜ ಜಾತಿ–ಮತ–ಧರ್ಮಗಳಿಗೆ ನೀಡಿರುವ ಪ್ರಾಮುಖ್ಯತೆಯನ್ನು 'ಮುನ್ನಾದಿನ' ಎಂಬ ಕಥೆಯಲ್ಲಿ ಗೌರಮ್ಮ ಅಲ್ಲಗಳೆಯುತ್ತಾರೆ. 'ಕಾಡ' ಎಂಬ ಅನಾಥ ಬಾಲಕ ಚಿಕ್ಕಪ್ಪನ ಮನೆಯಲ್ಲಿ ದುಡಿತವನ್ನು ಕಲಿತವನು, ಕಾಫಿ ತೋಟದಲ್ಲಿ ಪ್ರಾಮಾಣಿಕವಾಗಿ ದುಡಿಯುವ ಮೂಲಕ ದೊರೆಗಳ ಪ್ರೀತಿಗೆ ಪಾತ್ರನಾಗುತ್ತಾನೆ. ಮುಂದೆ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳಬೇಕಾದ ಸನ್ನಿವೇಶ ನಿರ್ಮಾಣವಾಗುತ್ತದೆ.

> "ಎಷ್ಟಾದರೂ ಹನ್ನೊಂದು ವರ್ಷದ ಪ್ರಾಯದ ಹುಡುಗ. ಜಾತಿ–ನೀತಿಗಳ ವಿಷಯಗಳ ತಿಳಿವಳಿಕೆ ಇಲ್ಲದೆ, ಹುಟ್ಟುವುದು ಕೆಲಸ ಮಾಡಲು, ಹೊಟ್ಟೆ ಹೊರೆಯಲು ಎಂಬ ಒಂದೇ ಒಂದು ಭಾವನೆಯಿಂದ ಬೆಳೆದ ಮಗು ಅವನಿಗೇನು ಗೊತ್ತು. ತನ್ನ ಜಾತಿಯನ್ನು ತ್ಯಜಿಸಿ ವಿಧರ್ಮಿಯಾಗಬಾರದೆಂದು? ಯಾವ ಜಾತಿಯಾದರೇನು? ಯಾವ ಮತವಾದರೇನು? ಹೊಟ್ಟೆ ತುಂಬ ಕೂಳು ಮೈತುಂಬ ಬಟ್ಟೆ, ಜೊತೆಗೆ ತಿಂಗಳಿಗೆ ಎರಡು ರೂಪಾಯಿ ಸಂಬಳ ಬೇರೆ. ಇಷ್ಟೆಲ್ಲ ಸಿಕ್ಕುವಾಗ ಜಾತಿ ನೀತಿ ಎಂದೇಕೆ ಸುಮ್ಮನೆ ಪೇಚಾಡಬೇಕು? ಅದರಲ್ಲೂ ದೊರೆ ತನ್ನನ್ನು ತಮ್ಮ ಜಾತಿಗೆ ಸೇರಿಕೋ ಎನ್ನುವಾಗ ಬಡಕಾಡನಿಗೆ ಸಂತೋಷವಾಯಿತೆಂದರೆ ಆಶ್ಚರ್ಯವೇನು? ದೊರೆಯ ಜಾತಿಗೆ ಸೇರುವುದೇನು ಕಡಿಮೆ ಭಾಗ್ಯವೆ? ಕಾಡ ಕ್ರಿಶ್ಚಿಯನ್ ಆಗಿ 'ಜೋಸೆಫ್ ಕಾಡ' ಆದ."

ಮತಾಂತರ ಕಥೆಯ ಕಾಡನಿಗೆ ಮತಾಂತರವೆನ್ನುವುದು ಧಾರ್ಮಿಕ ತಳಮಳ ಅಲ್ಲವೇ ಅಲ್ಲ. ಅವನ ಮಟ್ಟಿನ ಮೂಲಭೂತ ಅಗತ್ಯಗಳು ಪೂರೈಕೆಯಾಗುವುದೇ ಅವನ ಮೊದಲ ಆದ್ಯತೆ. ಈ ಆದ್ಯತೆಯ ಎದುರಿಗೆ ಧರ್ಮದ ಪ್ರಶ್ನೆ ನಿಜವಾಗಿಯು ಗೌಣ. ಗೌರಮ್ಮನವರ ಈ ಮೂಲಸತ್ಯದ ಕಡೆಗೆ ಓದುಗರ ಗಮನ ಸೆಳೆಯುತ್ತಾ ಮತಾಂತರದ ಪ್ರಶ್ನೆಯು ಪ್ರಾಯೋಗಿಕ ಅನಿವಾರ್ಯತೆ, ಆ ಕಾರಣಕ್ಕಾಗಿ ನಡೆಯುವ ಅಸಂಖ್ಯಾತ ಹುನ್ನಾರಗಳು ಸಮುದಾಯದಲ್ಲಿ ಈ ಕಾರಣಕ್ಕಾಗಿ ನಡೆಯುವ ಗಲಭೆಗಳು, ಎಡರುಗಳು ಇವೆಲ್ಲದರ ಕಡೆಗೆ ಸೆಳೆಯುತ್ತಾರೆ.

> "ಕಾಡನಿಗೇನು? ಜಾತಿಗೆ ಅವನ ದೃಷ್ಟಿಯಲ್ಲಿ ಮೌಲ್ಯವಿಲ್ಲ. ಎಷ್ಟು ಸುಲಭವಾಗಿ ಕ್ರಿಶ್ಚಿಯನ್ ಆಗಿದ್ದನೋ ಅದಕ್ಕಿಂತಲೂ ಹೆಚ್ಚಿನ ಉತ್ಸಾಹದಿಂದ ಮುಸಲ್ಮಾನನಾಗಲೊಪ್ಪಿದ. ಹಿಂದೆ ಹಿಡಿ

ಕೂಳಿಗಾಗಿ ಜಾತಿ ಬಿಟ್ಟಿದ್ದರೆ ಈಗ ಪ್ರೇಮ ಕಾರಣವಾಗಿತ್ತು. ಹುಸೇನ್‌ಬೀಗಾಗಿ ಜೀವಬಿಡಲು ಸಿದ್ಧನಿದ್ದ. ಅವನಿಗೆ ಬೆಲೆಯಿಲ್ಲದ ಜಾತಿಯನ್ನು ಬಿಟ್ಟ ಮಾತ್ರಕ್ಕೆ ಅವಳು ಲಭಿಸುವಳೆಂದಾದ ಮೇಲೆ ಮುಸಲ್ಮಾನ ಧರ್ಮಕ್ಕೆ ಮತಾಂತರ ಹೊಂದಲು ಹೆಚ್ಚು ಸಮಯವಾಗಲಿಲ್ಲ."[೨]

ಈ ರೀತಿಯಾಗಿ 'ಕಾಡ' ಎರಡನೆಯ ಬಾರಿ ಜಾತಿ ಬದಲಾಯಿಸುವ ಮೂಲಕ 'ಇಸ್ಮಾಯಿಲ್ ಕಾಡಕಾಕ' ಆದ. ಜೀವನಕ್ಕಿಂತ ಜಾತಿಗೆ ಪ್ರಾಮುಖ್ಯತೆ ಕೊಟ್ಟು ಬದುಕನ್ನು ದುರಂತಕ್ಕೀಡು ಮಾಡಿಕೊಳ್ಳುವ ಜನರನ್ನು ವಿಡಂಬಿಸುವಂತೆ ಈ ಕಥೆಯಿದೆ. ಜಾತಿಗಿಂತ ಬದುಕು ಮುಖ್ಯ ಎಂಬುದನ್ನು ಜನ ಅರಿಯಬೇಕಾಗಿರುವ ಅಗತ್ಯವನ್ನು ಗೌರಮ್ಮನವರು ಇಲ್ಲಿ ಮನಗಾಣಿಸಿದ್ದಾರೆ. ಅಷ್ಟೇ ಅಲ್ಲ ಭಾರತದ ಭಾವೈಕ್ಯತೆಗೆ ಗಾಂಧಿ ಕಂಡುಕೊಂಡ ಉದಾರವಾದಿ ಚಿಂತನೆಯಿಂದ ಹಿಂದೂ ಮುಸ್ಲಿಂ ಐಕ್ಯತೆಯನ್ನು ಕಾರ್ಯತಃ ಆಚರಣೆಗೆ ತಂದವನೂ ಕಾಡ ಮೇಸ್ತ್ರಿ ಎಂಬ ವಿಚಾರವನ್ನು ಗೌರಮ್ಮ ಕಥೆಯ ಆರಂಭದಲ್ಲಿ ಹೇಳಿದ್ದಾರೆ.

ಮತಾಂತರವನ್ನು ವಸ್ತುವನ್ನಾಗುಳ್ಳ ಗೌರಮ್ಮನವರ ಮತ್ತೊಂದು ಕಥೆ 'ಅಪರಾಧಿ ಯಾರು' ಎಂಬುದು. ಗಂಡನನ್ನು, ತಂದೆಯನ್ನು ಕಳೆದುಕೊಂಡು ಅನಾಥಳಾದ ಪಾರ್ವತಿ ಪುಟ್ಟ ಮಗುವನ್ನು ಸಾಕುವ ಸಲುವಾಗಿ ತನ್ನ ಜಾತಿಯವರೆ ಆದ ನಾಗೇಶರಾಯರ ಮನೆಯಲ್ಲಿ ಕೆಲಸಕ್ಕೆ ಸೇರುತ್ತಾಳೆ. ಆದರೆ ಅಲ್ಲಿ ಅವನಿಂದ ಅತ್ಯಾಚಾರಕ್ಕೊಳಗಾಗಿ ತನ್ನ ಮೇಲೆ ಹೊರಿಸಿದ ಅಪವಾದದ ಹೊರೆಯೊಡನೆ ಊರಿನಿಂದ ಬಹಿಷ್ಕಾರಕ್ಕೆ ಒಳಗಾಗುತ್ತಾಳೆ. ಮುಂದಿನ ಜೀವನದ ದಾರಿ ಕಾಣದೆ ಆತ್ಮಹತ್ಯೆಗೆ ಶರಣಾಗಲು ಯತ್ನಿಸಿದಾಗ ಮುಸ್ಲಿಂ ಧರ್ಮದ ಸ್ನೇಹಿತೆ ಉನ್ನೀಸಳ ನೆರವಿಗೆ ಬರುತ್ತಾಳೆ. ಪಾರ್ವತಿಯ ಸ್ಥಿತಿಯನ್ನು ಕಂಡ ಅವಳಿಗೆ,

> "ಅನಾಥ ಅಬಲೆಯರು ಅತ್ಯಾಚಾರಿಯ ಅತ್ಯಾಚಾರಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೇ ಅವರ ಜಾತಿಯ ನೀತಿಯಾದರೆ ನಮಗಾ ಜಾತಿಯಲ್ಲಿ ಜನ್ಮಕೊಡದಿದ್ದುದ್ದಕ್ಕಾಗಿ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ."[೩]

ಎನ್ನುತ್ತಾಳೆ. ಇಲ್ಲಿ ಹಿಂದೂ ಧರ್ಮದ ಹೊರಗಿನವಳಾದ ಉನ್ನೀಸಳಿಗೆ ಈ ಧರ್ಮದ ಕ್ರೌರ್ಯ ಕಾಣುತ್ತಿರುವುದರಲ್ಲಿ ವಿಶೇಷವಿಲ್ಲ. ಆದರೆ ಇದೇ ಧರ್ಮದ ಒಳಗಿರುವ ಅಕ್ಷರಸ್ಥೆ ಲಕ್ಷ್ಮಿಯಂತವಳಿಗೂ ಸಹ ಕುರುಡು ನಂಬಿಕೆಗಳ ವಿರುದ್ಧ ಏನೂ ಮಾಡಲಾಗದ ಅಸಹಾಯಕತೆಯಿದೆ.

"ಊರು ತುಂಬ ನಮ್ಮವರ ಮನೆಗಳಿದ್ದೂ ಪಾರ್ವತಿಗೆ ಬಾಗಿಲನ್ನು ತೆರೆಯುವವರಿರಲಿಲ್ಲ. ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ. ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ. ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು, ನಮ್ಮ ಜಾತಿಯ ದೊಡ್ಡತನದ ಕುರುಹು."[೮]

ಇಲ್ಲಿ ಪುರುಷಕೇಂದ್ರಿತ ಮೌಲ್ಯಗಳ ವ್ಯವಸ್ಥೆಯಲ್ಲಿ ಜೀವಿಸುತ್ತಿರುವ ಹೆಣ್ಣುಗಳು, ಸಮಾಜದ ಶೋಷಣೆಯ ಬಗ್ಗೆ ಚಿಂತಿಸುವಷ್ಟು ಪ್ರಬುದ್ಧರಾಗಿರುವುದರ ಸೂಚನೆಯಿದೆ. ತೀರಾ ಪ್ರತಿಭಟನೆ ಹಾಗೂ ಆಕ್ರೋಶಗಳು ವ್ಯವಸ್ಥೆಯ ವಿರುದ್ಧ ಕಂಡುಬರದಿದ್ದರೂ, ಅದರ ಶೋಷಣೆಯನ್ನು ಅರ್ಥೈಸಿಕೊಳ್ಳುವಷ್ಟು ಜಾಗೃತಿ ಸ್ತ್ರೀಯರಲ್ಲಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲ ಗೌರಮ್ಮನವರ ಈ ಕಥೆಯ ಕೊನೆಯಲ್ಲಿ ಪತ್ರಿಕೆಯಲ್ಲಿ ಪಾರ್ವತಿಗೆ ಸಂಬಂಧಪಟ್ಟ ವಿಚಾರವೊಂದು ಪ್ರಕಟವಾಗುತ್ತದೆ.

"ಮೊನ್ನೆ ದಿನ ಹಿಂದೂ ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದುದು ಊರಿನ ಹಿಂದೂಗಳಿಗೆಲ್ಲ ಬಹಳ ವಿಷಾದವನ್ನುಂಟು ಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂಧರ್ಮ ರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು."[೯]

ಭಕ್ಷಕರೇ ರಕ್ಷಕರ ಸ್ಥಾನದಲ್ಲಿರುವ ವ್ಯವಸ್ಥೆಯ ದುರಂತ ವ್ಯಂಗ್ಯವನ್ನು ಗೌರಮ್ಮನವರ ಮಾತುಗಳು ಸೂಚಿಸುತ್ತವೆ. ಹೆಣ್ಣು ಮತಾಂತರಗೊಂಡದ್ದು ಹಿಂದೂ ಧರ್ಮಕ್ಕೆ ಅವಮಾನ ಎಂದು ಭಾವಿಸುವ ಜನ ಅವಳ ಕಾರ್ಯದ ಹಿಂದಿರುವ ಒತ್ತಡವನ್ನು ತಿಳಿಯಲು ನಿರಾಕರಿಸುವುದೇಕೆ? ಪುರುಷಕೇಂದ್ರಿತ ವ್ಯವಸ್ಥೆ ಜಾಗರೂಕ ಸ್ಥಿತಿಯಲ್ಲಿದ್ದು ತನ್ನ ಪ್ರಾಬಲ್ಯವನ್ನು ಉಳಿಸಿಕೊಳ್ಳುವ ಹುನ್ನಾರವೇ? ಇದು ಎಂಬಂತಹ ಪ್ರಶ್ನೆಗಳು ಹುಟ್ಟುತ್ತವೆ. ಈ ರೀತಿ ಓದುಗರಲ್ಲಿ ಪ್ರಶ್ನೆಯೇಳುವಂತೆ ಒಂದು ಸಾಮಾಜಿಕ ಸಮಸ್ಯೆಯನ್ನು ಕಥಾರೂಪದಲ್ಲಿ ಹೆಣೆದಿರುವುದರಲ್ಲಿ ಗೌರಮ್ಮನವರ ಯಶಸ್ಸಿದೆ.

ಜಾತಿ ಹಾಗೂ ಧರ್ಮಗಳು ಹೆಚ್ಚು ಪ್ರಭಾವ ಬೀರುವುದು ವಿವಾಹದಂತಹ ವಿಚಾರದಲ್ಲಿ. ಸವರ್ಣೀಯ ವಿವಾಹಗಳೇ ನಡೆಯಬೇಕೆಂಬ ಮಡಿವಂತಿಕೆಯನ್ನು ಕಾಯ್ದುಕೊಳ್ಳುವ ಜಾತಿಗಳು ಅಂತರ್ಜಾತಿ ವಿವಾಹಗಳನ್ನು ಬಹಿಷ್ಕರಿಸುತ್ತವೆ. ಅಷ್ಟೇ ಅಲ್ಲ ಅಂತರ್ಜಾತಿ ವಿವಾಹಗಳಿಗೆ ಮುಂದಾಗುವವರಿಗೆ ಸಾಕಷ್ಟು ದೈಹಿಕ ಹಾಗೂ ಮಾನಸಿಕ ಹಿಂಸೆಗಳನ್ನು ನೀಡುತ್ತಾ ಬಂದಿದೆ. ಹನ್ನೆರಡನೆಯ ಶತಮಾನದಲ್ಲೇ ಬಸವಣ್ಣ ಅಂತರ್ಜಾತಿ ವಿವಾಹ ಮಾಡಸಲು ಮುಂದಾಗಿ ಸಮಾಜದ

ಅಲ್ಲೋ-ಕಲ್ಲೋಲಕ್ಕೆ ಕಾರಣರಾದರು. ವಚನಸಾಹಿತ್ಯವನ್ನು ಬಿಟ್ಟರೆ ಇಡೀ ಕನ್ನಡ ಸಾಹಿತ್ಯದಲ್ಲಿ ಅಂತರ್ಜಾತಿ ವಿವಾಹಗಳ ಪ್ರಸ್ತಾಪ ಬರುವುದು ಹೊಸಗನ್ನಡ ಸಾಹಿತ್ಯದಲ್ಲೇ. ಹೊಸ ಶಿಕ್ಷಣ ಪಡೆದ ಪ್ರಜ್ಞಾವಂತ ಯುವಜನ ಮದುವೆಗೆ ಜಾತಿ ಮುಖ್ಯವಲ್ಲ. ಪ್ರೀತಿಯೇ ಮುಖ್ಯವೆಂಬ ಸತ್ಯವನ್ನು ಎತ್ತಿಹಿಡಿಯಿತಾದರೂ ಸಾಂಪ್ರದಾಯಿಕ ಸಮಾಜ ಅದನ್ನು ಒಮ್ಮೆಗೆ ಸ್ವೀಕರಿಸುವ ಮನಃಸ್ಥಿತಿಯನ್ನು ಹೊಂದಿರಲಿಲ್ಲ. ಆದ್ದರಿಂದ ಕುಟುಂಬಗಳಲ್ಲಿ ವೈಮನಸ್ಸು ಅಧಿಕವಾಗಿ ಸಂಬಂಧಗಳಲ್ಲಿ ಬಿರುಕುಗಳು ಕಾಣಿಸಿಕೊಳ್ಳಲು ಕಾರಣವಾಯಿತು. ಅಂತರ್ಜಾತಿ ವಿವಾಹವಾಗಲು ಬಯಸುವ ಪ್ರೇಮಿಗಳು ಎದುರಿಸಬೇಕಾಗಿ ಬಂದಂತಹ ಹಲವು ಸವಾಲುಗಳು ಹಾಗೂ ಸಮಾಜ ನಡೆದುಕೊಳ್ಳುವ ರೀತಿ ಗೌರಮ್ಮನವರ 'ಹೋಗಿಯೇ ಬಿಟ್ಟಿದ್ದ' ಕಥೆಯ ಕಥಾವಸ್ತುವಾಗಿದೆ.

ರೈಲಿನ ಪ್ರಯಾಣದೊಂದಿಗೆ ಆರಂಭವಾಗುವ ಕಥೆಯಲ್ಲಿ ಒಬ್ಬ ಮುದುಕ ಕಾಲೇಜು ಯುವಕರಿಗೆ ಒಂದು ಕಥೆ ಹೇಳಲು ಆರಂಭಿಸುತ್ತಾನೆ. ಅದು ಅವನದೆ ಎಂದು ಕೊನೆಯವರೆಗೂ ತಿಳಿಯದಂತೆ ಪ್ರೇಮಕಥೆಯನ್ನು ಆ ಮುದುಕ ಮುಂದುವರಿಸುತ್ತಾನೆ. ಹುಟ್ಟಿನಿಂದಲೇ ಕಷ್ಟಗಳೊಂದಿಗೆ ಬೆಳೆದಂತಹ ಕಥಾನಾಯಕ ಮುಸ್ಲಿಂ ಹೆಣ್ಣಾದ ಲತೀಫಾಳಿಂದಾಗಿ ಜೀವನದಲ್ಲಿ ಸುಖ-ಸಂತೋಷಗಳನ್ನು ಕಾಣುತ್ತಾನೆ. ಅವಳನ್ನು ಮದುವೆಯಾಗಲು ಬಯಸುತ್ತಾನೆ. ಆದರೆ ಜಾತಿ, ಮತಗಳು ಅಡ್ಡಗೋಡೆಯಾಗಿ ನಿಂತಾಗ ದಿಕ್ಕು ಕಾಣದ ಆತ ಅಳುತ್ತಿದ್ದ ಲತಿಯ ಹಣೆಗೆ ಮುತ್ತಿಟ್ಟು,

"ಅಳಬೇಡ ಲತೀ, ನಾವಿಬ್ಬರೂ ಜೊತೆಯಾಗಿ ಹೋಗೋಣ.

ನನ್ನೊಡನೆ ಬರಲು ನಿನಗೆ ಬೇಸರವಿಲ್ಲ ತಾನೆ?"[೬]

ಎಂದು ಕೇಳಿದವನೆ ಅವಳನ್ನು ಚೂರಿಯಿಂದ ಚುಚ್ಚಿ ತಾನು ಬಾವಿಗೆ ಹಾರುತ್ತಾನೆ. ಆದರೆ ಲತೀಯನ್ನು ಸೇರಲಾಗದ ಅವನು ಜನರ ರಕ್ಷಣೆಗೊಳಗಾಗಿ ಜೈಲಿಗೆ ಸೇರಿ ಅಲ್ಲಿಂದ ಹುಚ್ಚಾಸ್ಪತ್ರೆಗೆ ಹೋಗುತ್ತಾನೆ. ಹೀಗೆ ೩೦ ವರ್ಷಗಳ ಕಾಲ ಜೀವಂತಶವವಾಗಿ ಬದುಕನ್ನು ಸಾಗಿಸಿದ ಆತ ಕೊನೆಗೆ ಚಲಿಸುತ್ತಿರುವ ರೈಲಿನಿಂದ ಹಾರಿ ಪ್ರಾಣ ಕಳೆದುಕೊಳ್ಳುತ್ತಾನೆ.

ಗೌರಮ್ಮನವರ ಈ ಕಥನತಂತ್ರ ತಾತ್ವಿಕತೆಯಿಂದ ಕೂಡಿದೆ. ಏಕೆಂದರೆ ಪ್ರೀತಿ ಮಾಡಿ ವಿವಾಹವಾಗಲುಬಯಸಿ, ವ್ಯವಸ್ಥೆಯನ್ನು ಎದುರಿಸಲಾಗದೆ ಆತ್ಮಹತ್ಯೆಗೆ ಶರಣಾಗುವುದು ಸಾಮಾನ್ಯ ಸಂಗತಿ. ಆದರೆ ಅದನ್ನು ಯುವಕರ ಮುಂದೆ ನಿರೂಪಿಸುತ್ತಿರುವುದು ತುಂಬ ಮಹತ್ತ್ವದ ವಿಚಾರವಾಗಿದೆ. ಸಮಾಜದಲ್ಲಿ ಹೊಸ ಮೌಲ್ಯಗಳ ನಿರ್ಮಾಣಕ್ಕೆ ಕಾರಣವಾಗುವ ಯುವಕರು ಜಾತಿ-ಮತಗಳಿಗೆ ಹೆಚ್ಚಿನ

ಮಹತ್ತ್ವವನ್ನು ನೀಡಬಾರದು ಎಂಬ ಸಂದೇಶದೊಂದಿಗೆ, ಮೌಢ್ಯವನ್ನು ಎದುರಿಸಿ ನಿಲ್ಲುವ ಧೈರ್ಯವು ಮುಖ್ಯವಾದುದು ಎಂಬುದನ್ನು ಗೌರಮ್ಮ ತಿಳಿಸಿದ್ದಾರೆ. ಎಲ್ಲೋ ಒಂದು ಕಡೆ ಗೌರಮ್ಮನವರಿಗೆ ಅಂತರ್ಜಾತಿ ವಿವಾಹಗಳು ನಡೆಯುವುದರಿಂದ ದೇಶದಲ್ಲಿ ಐಕ್ಯತೆ ಮೂಡಬಹುದೆಂಬ ಕಾಳಜಿಯಿತ್ತೆಂದು ತೋರುತ್ತದೆ. ಇಂತಹ ಕಾಳಜಿ ಮತ್ತೊಮ್ಮೆ ಸಾಹಿತ್ಯದಲ್ಲಿ ಕಾಣುವುದು 'ತೇಜಸ್ವಿ'ಯವರ 'ಚಿದಂಬರ ರಹಸ್ಯ'ದಲ್ಲಿ. ಕಾದಂಬರಿ ಪ್ರಾರಂಭವಾಗುವುದು ಕ್ರಾಂತಿಕಾರಿ ಯುವಕರು ಜಾತಿನಿರ್ಮೂಲನಕ್ಕಾಗಿ ಕೈಗೊಳ್ಳಬೇಕೆಂಬ ಅಂತರ್ಜಾತಿ ವಿವಾಹದ ಪ್ರತಿಜ್ಞೆಯಿಂದಾದರೂ, ಅವರ ಆಶಯಗಳಿಗೆ ಬುಡವಿಲ್ಲದ ಕಾರಣ ಗಾಂಭೀರ್ಯ ಪಡೆಯುವುದಿಲ್ಲ. ಆದರೆ ಕೊನೆಗೆ ಅದು ಕಾರ್ಯಗತವಾಗುವುದು ಇಡೀ ಕೆಸರೂರು ನಾಶವಾದ ನಂತರ ಜಯಂತಿ ಹಾಗೂ ರಫಿಯವರ ಸಮಾಗಮದೊಂದಿಗೆ.

ಜಡ್ಡುಗಟ್ಟಿದ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಲು ಆವೇಶ, ಕೆಚ್ಚುಗಳಿಂದ ಸಾಧ್ಯವಿಲ್ಲ. ಸುವ್ಯವಸ್ಥಿತ ಜ್ಞಾನ, ಸನ್ನಿವೇಶ – ಸಂದರ್ಭಗಳು ಅಗತ್ಯವೆಂಬುದನ್ನು ತೇಜಸ್ವಿಯವರಂತೆ ಗೌರಮ್ಮನವರು ಮನಗಂಡಿದ್ದರು. ಹಾಗಾಗಿಯೇ ಅಂತರ್ಜಾತಿ ವಿವಾಹವಾಗಲು ಬಯಸಿದ ಕಥಾನಾಯಕ ಸುಲಭವಾಗಿ ತಾನು ಅಂದುಕೊಂಡದ್ದನ್ನು ಸಾಧಿಸಲು ಸಂಪ್ರದಾಯವನ್ನೇ ಉಸಿರಾಗಿಸಿಕೊಂಡಿರುವ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲವೆಂದು ಚಿತ್ರಿಸುತ್ತಾರೆ. ಆದರೆ ಶಿಕ್ಷಣ, ಆರ್ಥಿಕ ಭದ್ರತೆಗಳಿದ್ದರೆ ಇವುಗಳಿಂದ ಹೊರಬರಬಹುದೆಂಬುದನ್ನು ಯುವಕರ ಮುಂದೆ ಕಥೆಯನ್ನು ನಿವೇದಿಸುವ ಮೂಲಕ ಸೂಚಿಸುತ್ತಾರೆ. ನವ್ಯದ ತೇಜಸ್ವಿಯವರು ಚಿಂತಿಸಿದಂತಹ ವಿಚಾರವೊಂದನ್ನು ನವೋದಯ ಕಾಲದ ಗೌರಮ್ಮನವರು ಚಿಂತಿಸಿದ್ದರು ಎಂಬುದೆ ಅವರ ಸಾರ್ವಕಾಲಿಕತೆಯನ್ನು ಎತ್ತಿಹಿಡಿಯುತ್ತದೆ. ನವೋದಯದ ಕಾರಂತರಿಗಾಗಲೀ, ಕುವೆಂಪುಗಾಗಲೀ, ಮಾಸ್ತಿಯವರಿಗಾಗಲೀ ಮುಖ್ಯವಾಗದ ಅಂತರ್ಜಾತಿ ವಿವಾಹದ ಪ್ರಸ್ತಾಪ ಗೌರಮ್ಮನವರು ಮಾಡಿರುವುದೇ ಅವರ ಪ್ರಗತಿಗಾಮಿತ್ವ ಚಿಂತನೆಯ ಕುರುಹಾಗಿದೆ.

ಗೌರಮ್ಮನವರನ್ನು ಬಿಟ್ಟರೆ ಮತಾಂತರದಂತಹ ವಿಚಾರವನ್ನು ಕಥೆಯ ಹಂದರವನ್ನಾಗಿಸಿಕೊಂಡ ನವೋದಯದ ಮತ್ತೊಬ್ಬ ಲೇಖಕಿ ಶಾಂತಾದೇವಿ ಮಾಳವಾಡ. ಇವರ 'ರಂಜನಿ' ಎಂಬ ಕಥೆಯಲ್ಲಿ ಕಿತ್ತೂರ ದೊರೆ ಫಕೀರರುದ್ರಸರ್ಜನು ರಾಜನರ್ತಕಿಯಾದ ಮುಸ್ಲಿಂ ಹೆಣ್ಣನ್ನು ವೀರಶೈವ ದೀಕ್ಷೆ ಕೊಡಿಸಿ ಮದುವೆಯಾಗುತ್ತಾನೆ. ಆ ಕಾರಣದಿಂದಾಗಿ ಅವನನ್ನು ಎಲ್ಲ ಐಶ್ವರ್ಯಗಳನ್ನೂ ನೀಡಿ ರಾಜ್ಯದಿಂದ ಹೊರಗಿಡುತ್ತಾರೆ. ಜೀವಂತವಾಗಿರುವಷ್ಟು ಕಾಲ ಸಂತೋಷದಿಂದ ಒಟ್ಟಾಗಿ ಬದುಕಿದ ಇವರು ಸತ್ತ ಮೇಲೆಯೂ ಒಟ್ಟಾಗಿರುವ ಕನಸು ಕಾಣುತ್ತಾರೆ. ಆದರೆ ಕೆಲ ಧರ್ಮಾಭಿಮಾನಿಗಳು ಫಕೀರರುದ್ರಸರ್ಜನ ಸಮಾಧಿಯ ಬಳಿಯಿದ್ದ ರಂಜನಿಯ ಸಮಾಧಿಯನ್ನು ಹೊಡೆದು ನಾಶಮಾಡುತ್ತಾರೆ.

ಈ ಮೇಲಿನ ಕಥೆಗಳಿಂದ ಜಾತಿಯೆಂಬುದು, ಧರ್ಮವೆಂಬುದು ಮಾನವೀಯತೆಯನ್ನು ಕಳೆದುಕೊಂಡು ಕ್ರೌರ್ಯದಿಂದ ತುಂಬಿರುವುದು ಸ್ಪಷ್ಟವಾಗುತ್ತದೆ. 'ದಯೆಯೇ ಧರ್ಮದ ಮೂಲ' ಎಂಬ ವಿಚಾರ ಮಾಯವಾಗಿ ಸ್ವಾರ್ಥ, ದ್ವೇಷಗಳ ಅದರ ಸ್ಥಳವನ್ನಾಕ್ರಮಿಸಿವೆ. ಗೌರಮ್ಮನವರ ಮೂರು ಕಥೆಗಳಾದ 'ಅಪರಾಧಿ ಯಾರು', 'ಮುನ್ನಾದಿನ', 'ಹೋಗಿಯೇ ಬಿಟ್ಟಿದ್ದ' ಎಂಬವುಗಳು ಜಾತಿ, ಮತಾಂತರ, ಮಡಿವಂತಿಕೆ ಎಂಬ ಸ್ವಾರ್ಥ ಭಾವನೆಗಳಿಂದ ಹೊರಬಂದು ಮನುಷ್ಯ ಉದಾರವಾದಿ ಮನೋಭಾವದಿಂದ ಮಾನವೀಯತೆಗೆ ಮಹತ್ತ್ವ ಕೊಟ್ಟು ಬದುಕಬೇಕಾದ 'ಜೀವನ ಪ್ರೀತಿ'ಯನ್ನು ಎತ್ತಿಹಿಡಿದಿವೆ.

## ಅಡಿಟಿಪ್ಪಣಿ

೧. 'ಮುನ್ನಾದಿನ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ– ೨೦೮–೨೦೯

೨. 'ಮುನ್ನಾದಿನ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ– ೨೧೧

೩. 'ಅಪರಾಧಿ ಯಾರು' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ. ಪುಟ–೭೧

೪. 'ಅಪರಾಧಿ ಯಾರು' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ. ಪುಟ–೭೩

೫. 'ಅಪರಾಧಿ ಯಾರು' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಪ್ರೊ. ಕಾಳೇಗೌಡ ನಾಗವಾರ. ಪುಟ–೭೪

೬. 'ಹೋಗಿಯೇ ಬಿಟ್ಟಿದ್ದ' – 'ಜೀವನ ಪ್ರೀತಿ' ಕಥಾಸಂಕಲನ. ಸಂ. ಕಾಳೇಗೌಡ ನಾಗವಾರ, ಪುಟ– ೮೦

## ೬. ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ವಿವಾಹ ಹಾಗೂ ವರದಕ್ಷಿಣೆ ಸಮಸ್ಯೆ

ಮಾನವ ಜೀವಿಯ ವಿಕಾಸಯಾತ್ರೆಯ ಹಲವು ಹಂತಗಳಲ್ಲಿ ವಿವಾಹವೂ ಒಂದು. ಅಲೆಮಾರಿ ಜೀವನ ಬಿಟ್ಟು ಒಂದೆಡೆ ನೆಲೆನಿಂತ ಮನುಷ್ಯರ ನಡುವೆ ಹೆಣ್ಣು-ಗಂಡುಗಳ ದೈಹಿಕ ಆಕರ್ಷಣೆ ಸಾಮಾನ್ಯವಾದರೂ ಹೆಣ್ಣು ಸೃಷ್ಟಿಕ್ರಿಯೆಗೆ ಕಾರಣಳಾದಾಗ ಅದೊಂದು ಅದ್ಭುತಶಕ್ತಿಯೆಂದು ತಿಳಿದ ಗಂಡು ಆಕೆಯನ್ನು ದೇವತೆಯಂತೆ ಆರಾಧಿಸಿದ ಸೃಷ್ಟಿಕ್ರಿಯೆಯ ಹಿಂದೆ ತನ್ನ ಪಾಲಿರುವುದನ್ನು ಅರಿಯದ ಆತ ಯಾವುದೋ ಅದ್ಭುತ ಶಕ್ತಿ ಹೆಣ್ಣಿಗೆ ಈ ರೀತಿಯ ವರ ನೀಡುತ್ತಿದೆಯೆಂದು ನಂಬಿದ್ದ. ಆದರೆ ದುಡಿಮೆಯಲ್ಲಿ ತೊಡಗಿಸಿಕೊಂಡ ಗಂಡು ಕಾಲಾನಂತರ ತನ್ನ ಉತ್ಪಾದಕ ಶಕ್ತಿಯನ್ನು ಗುರುತಿಸಿಕೊಂಡ ಪರಿಣಾಮವಾಗಿ ಹೆಚ್ಚೆಚ್ಚು ಸ್ವಾತಂತ್ರ್ಯವನ್ನು, ಅಧಿಕಾರವನ್ನು ಗಳಿಸಿಕೊಂಡ. ಇದರ ಬದಲಾಗಿ ಹೆಣ್ಣು ನಿರಂತರ ಸೃಷ್ಟಿಕ್ರಿಯೆಯ ಕಾರಣದಿಂದಾಗಿ ಮನೆಗೆ ಸೀಮಿತವಾಗಿ ಉಳಿಯುವಂತಾಯಿತು.

ಮಾತೃಪ್ರಧಾನ ವ್ಯವಸ್ಥೆ ಪಿತೃಪ್ರಧಾನ ವ್ಯವಸ್ಥೆಯತ್ತ ಸಾಗಿತು. ಇದು ಆಕಸ್ಮಿಕವೂ ಅಲ್ಲ; ಹಿಂಸಾತ್ಮಕ ಕ್ರಾಂತಿಯ ಫಲವೂ ಅಲ್ಲ ಎಂದು ಗುರುತಿಸುವ ಸ್ತ್ರೀವಾದಿ ಚಿಂತಕಿ 'ಸಿಮೋನ್ ದ ಬೊವಾ' ಅವರು ತಮ್ಮ 'ದಿ ಸೆಕೆಂಡ್ ಸೆಕ್ಸ್' ಕೃತಿಯಲ್ಲಿ ಇದರ ವಿಶ್ಲೇಷಣೆಗೆ ತೊಡಗುತ್ತಾರೆ.

> "ಮಾನವ ಜನಾಂಗದ ಉಗಮ ಕಾಲದಿಂದಲೂ ಗಂಡಸರಿಗಿದ್ದ ಜೈವಿಕ ನೆಲೆಯ ಮೇಲುಗೈ ಅವರಿಗೆ ಏಕೈಕ ಅಧಿಪತಿಗಳಾಗುವ ಅವಕಾಶವನ್ನೊದಗಿಸಿತು. ಈ ಅವಕಾಶವನ್ನೆಂದೂ ಅವರು ಬಿಟ್ಟುಕೊಟ್ಟಿಲ್ಲ. ತಮ್ಮ ಸ್ವಾತಂತ್ರ್ಯದ ಕೊಂಚ ಭಾಗವನ್ನಷ್ಟೇ ನಿಸರ್ಗ ಮತ್ತು ಹೆಣ್ಣಿಗೆ ಬಿಟ್ಟುಕೊಟ್ಟಿದ್ದಾರೆ. ಕೊನೆಗೆ ಅದನ್ನು ಅವರೇ ಹಿಂದಕ್ಕೆ ಪಡೆದುಕೊಂಡರು. ಹೆಣ್ಣು ಯಾವಾಗಲೂ ಅನ್ಯವ್ಯಕ್ತಿಯಾಗಿ ಜೀವಿಸಬೇಕಾಗಿ ಬಂದ ಅಸ್ಪಷ್ಟವಾದ ಅಧಿಕಾರವನ್ನು ಮಾತ್ರವೇ ಪಡೆದುಕೊಂಡಿದ್ದಾಳೆ. ಗುಲಾಮಳಾಗಿರಬೇಕೋ ಅಥವಾ ಆರಾಧಿಸುವ ದೈವವಾಗಿರಬೇಕೋ ಎಂಬುದು ಅವಳ ಆಯ್ಕೆಯಾಗಿರಲಿಲ್ಲ."[೧]

ಸಿಮೋನ್ ದ ಬೊವಾರವರು ಹೆಣ್ಣು ಮಾತೃಪ್ರಧಾನದ ಸ್ಥಿತಿಯಿಂದ ಪಿತೃಪ್ರಧಾನ ಸ್ಥಿತಿಗೆ ತಲುಪಿದ್ದರಲ್ಲಿ ಹೇಗೆ ಅವಳ ಆಯ್ಕೆ ಇರಲಿಲ್ಲವೆಂಬುದನ್ನು ತಿಳಿಸಿಕೊಡುವುದರ ಜೊತೆಗೆ ಪ್ರಾರಂಭದಿಂದಲೇ ವ್ಯವಸ್ಥೆ ಹೆಣ್ಣನ್ನು ತನ್ನ ಅಗತ್ಯಕ್ಕೆ, ಅರಿವಿಗೆ ತಕ್ಕಂತೆ ಅರ್ಥೈಸಿಕೊಳ್ಳುತ್ತಿರುವ, ರೂಪಿಸಿಕೊಳ್ಳುತ್ತಿರುವ ಸತ್ಯವನ್ನು ಹೊರಹಾಕುತ್ತಾರೆ.

ಪಿತೃಪ್ರಧಾನ ವ್ಯವಸ್ಥೆ ಹೆಚ್ಚೆಚ್ಚು ಬಲಗೊಂಡಂತೆ ಬಹುಪತ್ನಿತ್ವ ಹಾಗೂ ಬಹುಪತಿತ್ವ ಆಚರಣೆಗಳಲ್ಲಿ ಪಲ್ಲಟ ಕಂಡುಬಂತು ಬಹುಪತಿತ್ವದ ನಿರ್ಮೂಲನಕ್ಕೆ ತೊಡಗಿದ ವ್ಯವಸ್ಥೆ ಬಹುಪತ್ನಿತ್ವದ ಬದಲಾಗಿ 'ವೇಶ್ಯೆ' ವ್ಯವಸ್ಥೆಯನ್ನು ರೂಪಿಸಿತು. ಅನ್ಯಮಾರ್ಗದಿಂದ ಮಕ್ಕಳನ್ನು ಪಡೆದಂತಹ ಅಂಬಾ, ಅಂಬಾಲಿಕೆಯರನ್ನು, ಕುಂತಿ-ಮಾದ್ರಿಯರನ್ನು ಗೌರವದಿಂದ ಕಾಣುತ್ತಿದ್ದ ಸಮಾಜವು ಪಾತಿವ್ರತ್ಯತೆಯ ಹೆಸರಿನಲ್ಲಿ ಮಂತ್ರಶಕ್ತಿಯಿಂದ ಮಕ್ಕಳನ್ನು ಹಡೆದಂತೆ ಮರು ರೂಪಿಸಿತು. ಐದು ಜನ ಪಾಂಡವರನ್ನು ಪತಿಯಾಗಿ ಪಡೆದ ದ್ರೌಪದಿ ಹಲವು ಕಾವ್ಯಗಳಲ್ಲಿ ಧರ್ಮರಾಯನ ಹೆಂಡತಿ ಇಲ್ಲವೇ ಅರ್ಜುನನ ಹೆಂಡತಿಯಾಗಿ ಮಾತ್ರ ಕಂಡುಬರುವಂತೆಯಾಯಿತು. ಸ್ವಯಂವರದಂತಹ ಆಯ್ಕೆಯ ಸ್ವಾತಂತ್ರ್ಯ ದೂರವಾಗಿ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಪರಿಕಲ್ಪನೆ ಮುನ್ನೆಲೆಗೆ ಬಂತು. ಹೆಣ್ಣು ಅಸಹಾಯಕಳು. ಹಾಗಾಗಿ ಗಂಡನ ಆಶ್ರಯ ಅಗತ್ಯ ಎಂಬುದನ್ನು ವ್ಯವಸ್ಥಿತವಾಗಿ ರೂಪಿಸಲಾಯಿತು. ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲೂ, ಯೌವ್ವನದಲ್ಲಿ ಗಂಡಿನ ಆಶ್ರಯದಲ್ಲೂ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲೂ ಹೆಣ್ಣು ಬಾಳಬೇಕೆಂದು ವಿಧಿಸಲಾಯಿತು. ಹೆಣ್ಣಿನ ಬದುಕಿನ ಪ್ರಮುಖ ಘಟ್ಟವಾದ ಯೌವ್ವನದಲ್ಲಿ ಅವಳ ಶೀಲದ ರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸಲು ವಿವಾಹದಂತಹ ಚೌಕಟ್ಟಿಗೆ ಅವಳನ್ನು ಒಳಪಡಿಸಲಾಯಿತು. ಆ ಮೂಲಕ ಇಡೀ ವ್ಯವಸ್ಥೆ ಅವಳ ಸ್ವಾತಂತ್ರ್ಯವನ್ನು ಕಸಿದುಕೊಂಡು ತನ್ನ ಗೆಲುವನ್ನು ವಿಜೃಂಭಿಸಿತು. ಅಷ್ಟೇ ಅಲ್ಲ ವಿವಾಹವಾಗದ ಹೆಣ್ಣನ್ನು ಅನುಮಾನದ ದೃಷ್ಟಿಯಿಂದ ನೋಡಲೂ ಪ್ರಾರಂಭಿಸಿತು. ಈ ಕುರಿತು ಸಿಮೋನ್ ದ ಬೊವಾ ಹೇಳುವ ಮಾತು ನೋಡಿ.

> "ಹೆಂಗಸರಿಗೆ ಸಮಾಜವು ಪರಂಪರೆಯಿಂದ ನೀಡಿರುವ ಜವಾಬ್ದಾರಿಯೆಂದರೆ ವಿವಾಹ. ಈಗಲೂ ಹೆಂಗಸರು ಮದುವೆಯಾಗುತ್ತಾರೆ. ಹಿಂದೆಯೂ ಆಗಿದ್ದರು, ಮುಂದೆಯೂ ಆಗಲಿದ್ದಾರೆ. ಇಲ್ಲವೇ ಆಗದಿದ್ದರೆ ಪರಿತಪಿಸುತ್ತಾರೆ. ಮದುವೆಯಾಗದ ಹೆಂಗಸು ವಿವರಣೆ ನೀಡಬೇಕಾಗುತ್ತದೆ. ಅವಳು ತಪ್ಪಳೋ, ಬಂಡಾಯಗಾರ್ತಿಯೋ ಅಥವಾ ವಿವಾಹವೆಂಬ ವ್ಯವಸ್ಥೆಯ ಬಗ್ಗೆ ನಿರಾಸಕ್ತಳೋ ಎಂಬೆಲ್ಲ ಪ್ರಶ್ನೆಗಳು ಏಳುತ್ತವೆ. ಅದಕ್ಕಾಗಿ ನಾವು ಮೊದಲು ವಿವಾಹಮೀಮಾಂಸೆ ಮಾಡಬೇಕು."[೨]

ಮದುವೆಯಾಗದ ಹೆಣ್ಣು ಎದುರಿಸಬೇಕಾದ ಸವಾಲುಗಳು ಗಂಡಿಗಿಂತ ಭಿನ್ನ. ಗಂಡು ಸಂಸಾರವನ್ನು ನಿರಾಕರಿಸಿ ಸನ್ಯಾಸಿಯಾಗುವುದು ಸುಲಭ. ಇದು ಮದುವೆಗಿಂತ ಪೂರ್ವದಲ್ಲಿ ಅಥವಾ ಅನಂತರವಾದರೂ ಅದಕ್ಕೆ ಅಡ್ಡಿಯಿಲ್ಲ, ದೂಷಣೆಯಿಲ್ಲ. ಬದಲಾಗಿ ಅಂತಹವರನ್ನು ಸಮಾಜ ಪೂಜ್ಯಭಾವನೆಯಿಂದ ಕಾಣುತ್ತದೆ. 'ಮಾಸ್ತಿ'ಯವರ 'ಮುನೀಶ್ವರನ ಮರ' ಕಥೆಯಲ್ಲಿನ ರಾಮಯ್ಯ ತನ್ನ ಹೆಂಡತಿಯ ಬಗ್ಗೆ ಕೇಳಿದ ಗಾಳಿಸುದ್ಧಿಯಿಂದಾಗಿ ಅವಳನ್ನು ತೊರೆದು ಸನ್ಯಾಸಿಯಾಗಿ ಹೋಗಿ ನಂತರ

ಊರಿಗೆ ಮರಳಿದಾಗ ಅವನು ಪೂಜ್ಯನಾಗುತ್ತಾನೆ. ಅದೇ ರೀತಿ 'ಆಚಾರ್ಯರ ಪತ್ನಿ' ಕಥೆಯ ರಾಮಾನುಜಾಚಾರ್ಯರು ಹೆಂಡತಿಯ ಒರಟುತನಕ್ಕೆ ಬೇಸತ್ತು ಸನ್ಯಾಸಿಯಗಾಗಿ ಮನೆ ತೊರೆದು ಹೋಗುತ್ತಾರೆ. ಮುಂದೆ ಇವರುಗಳು ಮಹಾಜ್ಞಾನಿಗಳೆಂದು ಜನರಿಂದ ಪೂಜ್ಯರಾಗುತ್ತಾರೆ. ಆದರೆ ಇವರಿಂದ ನಿರಾಕರಣೆಗೆ ಒಳಗಾದ ಹೆಣ್ಣುಗಳು ರಾಜಮ್ಮನ ರೀತಿ ಪತಿತೆಯಾಗಬೇಕು ಇಲ್ಲವೆ ಆಚಾರ್ಯರು ಪತ್ನಿಯ ಹಾಗೆ ಅಲೆಮಾರಿಯಾಗಿ ಗಂಡನಿಗಾಗಿ ಹುಡುಕಾಡಬೇಕು. ತಪ್ಪು ಯಾರದೇ ಆದರೂ ಸಮಾಜ ದೂಷಿಸುವುದು ಗಂಡನಿಂದ ನಿರಾಕರಣೆಗೊಳಗಾದ ಹೆಣ್ಣನ್ನು ಅಥವಾ ಮದುವೆಯಾಗದೆ ಉಳಿಯುವ ಹೆಣ್ಣುಗಳನ್ನೇ ಎಂಬುದು ಕಟುವಾಸ್ತವ.

ಭಾರತೀಯ ಪರಂಪರೆಯ ಚೌಕಟ್ಟಿಗೆ ಮೀಸಲಾಗಿಸಿ ವಿವಾಹವನ್ನು ವಿವೇಚಿಸುವುದಾದರೆ, ಅದೊಂದು ಸ್ತ್ರೀ ಶೋಷಣೆಯ ಆಯುಧವೇ ಆಗಿದೆ. ನಮ್ಮ ಮಹಾಕಾವ್ಯಗಳನ್ನು ಕಂಡರೂ ಈ ವಿಚಾರ ಸ್ಪಷ್ಟವಾಗುತ್ತದೆ. ರಾಮಾಯಣದಲ್ಲಿ ರಾಮನನ್ನು ಮದುವೆಯಾದ ಸೀತೆ ಜೀವನದುದ್ದಕ್ಕೂ ಕಂಡದ್ದು ದುಃಖವನ್ನೇ ಲಕ್ಷ್ಮಣನ ಹೆಂಡತಿಯಾದ ಊರ್ಮಿಳೆಯ ಸ್ಥಿತಿ ಇದಕ್ಕಿಂತ ಭಿನ್ನವಲ್ಲ. ಅಷ್ಟೇ ಅಲ್ಲ ಯಾರ ಗಮನಕ್ಕೂ ಬಾರದ ಭರತ-ಶತೃಘ್ನರ ಹೆಂಡತಿಯ ಅನುಭವಿಸಿದ ಯಾತನೆಯನ್ನು ಬೇಂದ್ರೆಯವರ 'ರಾಮಾಯಣ' ಎಂಬ ಕವನ ಸಹೃದಯರ ಮುಂದಿಡುತ್ತದೆ.

"ಲಕ್ಷ್ಮಣನಿಗೆ ವನವಾಸವು ಉರ್ಮಿಳೆ ಕುರುಡುಗಳೆದ ಕ್ಷಣ ಕ್ಷಣಾ
ಬರಲಿಲ್ಲವು ಲೆಕ್ಕಕ್ಕೆ ವರುಷಗಳು ಹದಿನಾಲ್ಕು ಭಣ ಭಣಾ
ಭರತನು ಕಣ್ಣಿಗೆ ಕಾಣುವ ಅಳತೆಯೊಳಿದ್ದನು ತಾ ದಿನದಿನಾ
ತಪವು ಭರತಗೂ ಮಾಂಡವಿಗೂ ತಪ, ವಿರಹವೆ ಪಾರಾಯಣಾ
ಶತ್ರುಘ್ನನು ಅರಮನೆಯೊಳಗಿದ್ದರು ಶ್ರುತಕೀರ್ತಿಗೆ ರಣ ರಣಾ"[5]

ಇವರಷ್ಟೇ ಅಲ್ಲದೆ ರಾವಣನ ಮಡದಿಯಾದ ಮಂಡೋದರಿ ತಾನಿದ್ದು ಅನ್ಯಳನ್ನು ಬಯಸಿದ ಗಂಡನೊಂದಿಗೆ ಎಷ್ಟು ಸಂಕಟದಿಂದ ಬಾಳ್ವೆ ನಡೆಸಿರಬೇಕೆಂಬುದನ್ನು ನೆನೆದರೆ ವಿವಾಹಗಳು ಸಂತೋಷದ ಆಗರಗಳಲ್ಲ ಎಂಬ ಮಾತು ಸ್ಪಷ್ಟವಾಗುತ್ತದೆ. ವಿವಾಹದ ಬಂಧನಕ್ಕೊಳಗಾಗಿ ಪರಿತಪಿಸುವ ಹೆಣ್ಣುಗಳು ಬರಿ ರಾಜಮನೆತನದಲ್ಲಿ ಮಾತ್ರವಲ್ಲ. ಸಾಮಾನ್ಯ ಜನಜೀವನದಲ್ಲೂ ಮಹಾತ್ಮರ ಜೀವನದಲ್ಲೂ ಸರ್ವೆಸಾಮಾನ್ಯವಾಗಿರುವುದನ್ನು ಕಾಣಬಹುದು. 'ವಿವಾಹ' ವೆಂದರೇನೆಂದು ತಿಳಿಯುವ ಮೊದಲೇ ಮದುವೆಯ ಸಂಪ್ರದಾಯಕ್ಕೆ ಒಳಗಾದ 'ಶಾರದದೇವಿ'ಯನ್ನು ದೇವತೆಯಂತೆ ಕಂಡ 'ರಾಮಕೃಷ್ಣರ

ಪರಮಹಂಸ'ರು ನಮಗೆ ಮಹನೀಯರು. ಆದರೆ ಆ ಪುಟ್ಟ ಹೆಣ್ಣಿನ ಮೇಲೆ ಸನ್ಯಾಸತ್ವ, ಮನೋನಿಗ್ರಹಗಳಂತಹ ವಿಚಾರಗಳನ್ನು ಹೇರುವ ಮೂಲಕ ತಾನು ಭಾವಿಸಿರುವ ಆದರ್ಶ ಬಾಳ್ವೆಗೆ ಅವರನ್ನು ಒಳಪಡಿಸುವುದು ಸರಿಯೇ? ಎಂಬುದನ್ನು ಯಾರೂ ಪ್ರಶ್ನಿಸರು. ಗಾಂಧೀಜಿ ಸಹ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ತೊಡಗಿ ಕೊಂಡಾಗ ತಮ್ಮ ಸುತ್ತ ಆದರ್ಶ ಚೌಕಟ್ಟನ್ನು ನಿರ್ಮಿಸಿಕೊಂಡರಲ್ಲದೆ ತಮ್ಮ ಪತ್ನಿಯು ಆ ಚೌಕಟ್ಟಿಗೆ ಒಳಪಡಬೇಕೆಂದು ಬಯಸಿದರು. ಇಲ್ಲೆಲ್ಲ ಹೆಣ್ಣಿನ ಸ್ವಇಚ್ಛೆಗೆ ಯಾವುದೇ ಅವಕಾಶಗಳಿರಲಿಲ್ಲವೆಂಬ ಸತ್ಯ ಕಹಿಯಾದರೂ ನಿಜಸಂಗತಿಯಾಗಿತ್ತು.

ಪರಂಪರೆಯ, ಸಂಪ್ರದಾಯದ ಒಂದು ವಿಧಿಯೆಂಬಂತೆ ಆಚರಣೆಯಲ್ಲಿ ನಿರಂತರವಾಗಿ ಮುಂದುವರೆಯುತ್ತಿರುವ 'ವಿವಾಹ'ದ ಪರಿಕಲ್ಪನೆ ಸಂಪೂರ್ಣವಾಗಿ ಕೆಟ್ಟದಲ್ಲದ ಕಾರಣದಿಂದ ಇಂದಿಗೂ ಮುಂದುವರೆದುಕೊಂಡು ಬಂದಿದೆ. ಬಹುಶಃ ಅದು ನಿಂತಿರುವುದು 'ಆದರ್ಶದಾಂಪತ್ಯ' ಎಂಬ ತಳಹದಿಯ ಮೇಲೆ. ಹೆಣ್ಣು ಕುಟುಂಬದ ಹಿತಕ್ಕಾಗಿ ತನ್ನ ಹಿತವನ್ನು ಬಲಿಕೊಟ್ಟು ಅದರ ರಕ್ಷಣೆ ಮಾಡಬೇಕಾಗುತ್ತದೆ. ಇಲ್ಲದಿದ್ದರೆ ಕುಟುಂಬವೇ ಸರ್ವನಾಶವಾಗುತ್ತದೆ ಎಂಬ ಎಚ್ಚರಿಕೆಯನ್ನು ವ್ಯವಸ್ಥೆ ಅವಳಿಗೆ ನೀಡುತ್ತಾ ಬಂದಿದೆ. ಇದರ ಸಮರ್ಥನೆಗಾಗಿ ಬೇಂದ್ರೆಯವರ 'ಮನದನ್ನೆ' ಕವನವನ್ನು ನೋಡಬಹುದು.



"ಆಡದಿರು ಮನದನ್ನೆ
ಎನಗೆ ಇದರಾಡದಿರು
- - - -
- - - -
ಸಿಡುಕಿರಲಿ ಮಿಡುಕಿರಲಿ
ಯಾವುದೇ ಒಡಕಿರಿ
ಅದರ ಸಪ್ಪಳವನ್ನು ಮಾಡಬೇಡ
ಹಾಳು ರಾಗವ ಮತ್ತೆ ಹಾಡಬೇಡ
ಅದಕಾಗಿ ಜೀವದುಸಿರೆತ್ತಬೇಡ"[8]

ಈಗೆಲ್ಲ ನೀನಿದ್ದಾಗ ಮಾತ್ರ ವಿವಾಹಬಂಧನ ಮುರಿಯದೆ ಸಂಸಾರ ಸುಂದರವಾಗಿರುತ್ತದೆ ಎಂದು ವ್ಯವಸ್ಥೆ ಹೆಣ್ಣನ್ನು ಮಾನಸಿಕವಾಗಿ ಸಿದ್ಧಗೊಳಿಸಿದೆ. ಆದ್ದರಿಂದಲೇ ಸಂಚಿಯ ಹೊನ್ನಮ್ಮನಂತಹ ಕವಿಯಿತ್ರಿಗೆ 'ಹದಿಬದೆಯ ಧರ್ಮ' ದಂತಹ ಕಾವ್ಯ ರಚಿಸಲು ಸಾಧ್ಯವಾಗುತ್ತದೆ. ಹೆಣ್ಣನ್ನು ಸಮಾಜ ಹೇಗೆ ಕಾಣಬೇಕು,

ಗಂಡನಾದವನು ಹೇಗೆ ನಡೆಸಿಕೊಳ್ಳಬೇಕು, ಅಷ್ಟೇ ಅಲ್ಲ, ಹೆಂಡತಿ ಸಹ ಗಂಡನೊಂದಿಗೆ ಹೇಗೆ ಅನುನಯದಿಂದ ಕೂಡಿರಬೇಕೆಂಬುದನ್ನೆಲ್ಲ ಆಕೆ ಹೇಳುತ್ತಾಳೆ. ಸಂಚಿಯ ಹೊನ್ನಮ್ಮನ 'ಹದಿಬದೆಯ ಧರ್ಮ' ಕ್ಕಿರುವ ಚಾರಿತ್ರಿಕ ಮಹತ್ವವನ್ನ ಪಕ್ಕಕ್ಕಿಟ್ಟು ಹೇಳುವುದಾದರೆ ಆಕೆಯು ಸಹ ವ್ಯವಸ್ಥೆ ಕಟ್ಟಿಕೊಂಡಿರುವ "ಆದರ್ಶದಾಂಪತ್ಯ" ಪರಿಕಲ್ಪನೆಯ ಚೌಕಟ್ಟಿನೊಳಗೆ ಇದ್ದಾಳೆ.

ಮನುಷ್ಯ ಹೆಚ್ಚೆಚ್ಚು ನಾಗರಿಕನಾದಂತೆ ವಿವಾಹಕ್ಕೆ ಹೆಚ್ಚು ಮಹತ್ವ ಕೊಡಲಾರಂಭಿಸಿದ. ವಿವಾಹವೆನ್ನುವುದು ಎಲ್ಲರೂ ಒಳಗೊಳ್ಳಲೇಬೇಕಾದ ವಿಧಿಯೆಂಬಂತೆ ಪರಿಭಾವಿಸಲಾಯಿತು. ಅಷ್ಟೇ ಅಲ್ಲ ಉತ್ಪಾದಕ ಶಕ್ತಿಯ ಕೇಂದ್ರವಾದ ಗಂಡು ಪರಮಾಧಿಕಾರವನ್ನು ಪಡೆದುಕೊಂಡ. ಹೆಣ್ಣಿನ ರಕ್ಷಕ ತಾನೆ ಎಂಬ ಅಹಂ ಅವನಲ್ಲಿ ಮನೆಮಾಡಿತು. ಹೀಗಾಗಿ ವರದಕ್ಷಿಣೆಯಂತಹ ಕ್ರೂರಪದ್ಧತಿ ಅಸ್ತಿತ್ವಕ್ಕೆ ಬರಲು ಸಾಧ್ಯವಾಯಿತು. ಹೆಣ್ಣುಮಕ್ಕಳ ಜವಾಬ್ದಾರಿಯನ್ನು ಕಳೆದುಕೊಳ್ಳುವ ದಾರಿಯೇ ವಿವಾಹವೆಂದು ಪರಿಭಾವಿಸಿದ ತಂದೆ-ತಾಯಿಗಳು ವರದಕ್ಷಿಣೆ ನೀಡಲು ಸ್ವಯಂಪ್ರೇರಿತರಾದರು. ಇದೆಲ್ಲದರಿಂದ ಸಮಾಜದಲ್ಲಿ ಕಾಣಿಸಿಕೊಂಡ ಈ ಸಂಪ್ರದಾಯ ಎಷ್ಟೋ ಹೆಣ್ಣುಮಕ್ಕಳ ಶೋಷಣೆಗೆ ಕಾರಣವಾಯಿತು. ಇವತ್ತಿಗೂ ಸಾವಿರಾರು ಮಂದಿ ಅಮಾಯಕ ಹೆಣ್ಣುಮಕ್ಕಳ ಸಾವಿಗೆ, ಸಂಕಟಕ್ಕೆ ಕಾರಣವಾಗಿರುವ 'ವರದಕ್ಷಿಣೆ' ಎಂಬ ಪಿಡುಗನ್ನು ಕುರಿತು ೧೯೩೦-೪೦ ರ ದಶಕದಲ್ಲೇ ಗೌರಮ್ಮನವರು ಚಿಂತಿಸಿರುವುದು ನಿಜವಾಗಿಯೂ ಬಹಳ ಮಹತ್ವದ ಸಂಗತಿಯಾಗಿದೆ.

ವೈವಾಹಿಕ ಬದುಕನ್ನೇ ತಮ್ಮ ಕಥೆ ಹಾಗೂ ಕಾದಂಬರಿಗಳ ವಸ್ತುವಾಗಿರಿಸಿಕೊಂಡಿರುವ ಕುವೆಂಪು, ಕಾರಂತ ಹಾಗೂ ಮಾಸ್ತಿಯವರಂತಹ ಮಹತ್ವದ ಲೇಖಕರು ಗಮನಿಸದ ಪ್ರಮುಖ ಸಾಮಾಜಿಕ ಸಮಸ್ಯೆಯಾದ 'ವರದಕ್ಷಿಣೆ'ಯನ್ನು ಕುರಿತು ನವೋದಯದ ಸಂದರ್ಭದಲ್ಲೇ ಚಿಂತಿಸಿರುವ ಗೌರಮ್ಮನವರ ವೈಚಾರಿಕತೆಯನ್ನು ಕಂಡರೆ ಆಕೆ ಉಳಿದೆಲ್ಲ ಲೇಖಕ-ಲೇಖಕಿಯರಿಗಿಂತ ಹೆಚ್ಚು ಪ್ರಗತಿಗಾಮಿ ಧೋರಣೆಯನ್ನು, ಸಾಮಾಜಿಕ ಕಳಕಳಿಯನ್ನು, ಸ್ತ್ರೀಪರ ಕಾಳಜಿಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಇಂಥದೊಂದು ಸಮಸ್ಯೆಯನ್ನು ಗುರುತಿಸುವುದರಲ್ಲೇ ಅವರ ವೈಶಿಷ್ಟ್ಯವಿದೆ, ಮಹತ್ತ್ವವಿದೆ.

ವಿವಾಹದ ಹಲವು ಮುಖಗಳ ಅನಾವರಣ ಗೌರಮ್ಮನವರ ಕಥೆಗಳಲ್ಲಿದೆ. ಸಾಂಪ್ರದಾಯಿಕ ಮೌಢ್ಯದ ಪ್ರತೀಕವಾದ ಬಾಲ್ಯವಿವಾಹಗಳಿಗೆ ಒಳಪಟ್ಟು ಗಂಡನನ್ನು ಕಳೆದುಕೊಂಡು ಜೀವನವಿಡೀ ನರಳುವ ಹೆಣ್ಣುಗಳ ಚಿತ್ರಣ ಒಂದು ಕಡೆಯಾದರೆ, ವಿದ್ಯಾಭ್ಯಾಸದಿಂದ ಪಡೆದ ಆತ್ಮವಿಶ್ವಾಸದಿಂದಾಗಿ ವ್ಯವಸ್ಥೆಯನ್ನು ಸುಧಾರಣೆಯ ಹಾದಿಯತ್ತ ಕರೆದೊಯ್ಯುವಂತೆ ಇನ್ನೂ ಕೆಲವು ಕಥೆಗಳಿವೆ. ಇದೆಲ್ಲದಕ್ಕಿಂತ

ಮುಖ್ಯವಾಗಿ ವರದಕ್ಷಿಣೆಯ ಭೂತದಿಂದಾಗಿ ಜ್ವಲಂತ ಸಮಸ್ಯೆಯಾಗಿ ಮಾರ್ಪಾಡಾಗುತ್ತಿರುವ ವಿವಾಹ ಕೇಂದ್ರದ ಅವಸ್ಥಾಂತರ ಚಿತ್ರಣವಿರುವ ಕಥೆಗಳು ಹೆಚ್ಚಿವೆ. ಸಾಮಾಜಿಕ ಸಮಸ್ಯೆಯಾಗಿ ಪರಿವರ್ತನೆಯಾಗುತ್ತಿರುವ ವಿವಾಹದ ಹಲವು ಮುಖಗಳ ಅನಾವರಣವನ್ನು ಮಾಡಿರುವ ಗೌರಮ್ಮನವರ ಚಿಂತನಾಶೀಲತೆ ಅಮೋಘವಾದದ್ದು.

ಸಂಪ್ರದಾಯದ ಹೆಸರಿನಲ್ಲಿ ಏರ್ಪಡಿಸುವ ಬಾಲ್ಯವಿವಾಹಗಳಿಂದಾಗಿ ಎಷ್ಟೋ ಜನರು ಮದುವೆಯೆಂದರೇನು? ಸಂಸಾರವೆಂದರೇನು? ಎಂದು ತಿಳಿಯುವ ಮೊದಲೇ ಗಂಡನನ್ನು ಕಳೆದುಕೊಂಡ ವಿಧವೆಯರಾಗುತ್ತಾರೆ. 'ವಾಣಿಯ ಸಮಸ್ಯೆ'ಯ 'ಇಂದು', 'ಪುನರ್ವಿವಾಹ'ದ 'ರಾಜಿ', 'ಅಪರಾಧಿಯ ಯಾರು' ವಿನ 'ಪಾರ್ವತಿ', 'ಒಂದು ಪುಟ್ಟ ಚಿತ್ರ' ದ 'ಶಾಂತಿ' ಇವರೆಲ್ಲ ವಿವಾಹವೆನ್ನುವ ವಿಧಿಗೊಳಪಟ್ಟು ತಮ್ಮ ಬದುಕನ್ನು ಕಳಕೊಂಡವರು.

ಹಿರಿಯರು ವಿವಾಹಕ್ಕಾಗಿ ಹೇರುವ ಚೌಕಟ್ಟುಗಳನ್ನು ಮೀರಿ ನಿಂತು ಅಕ್ಷರದಿಂದ ಪಡೆದ ಆತ್ಮಸ್ಥೈರ್ಯ ನೆರವಿನೊಂದಿಗೆ ತಮ್ಮ ಬದುಕನ್ನು ವಿವಾಹಕ್ಕೊಳಪಡಿಸಿಯೂ, ಸುಂದರಗೊಳಿಸಿಕೊಳ್ಳುವ 'ಪ್ರಾಯಶ್ಚಿತ್ತ' ಕಥೆಯ ಮೂರ್ತಿ, 'ಕೌಸಲ್ಯಾನಂದನ'ದ ವಸಂತ ಹಾಗೂ 'ಮರದ ಬೊಂಬೆ'ಯ ಶೈಲೆ. ಇವರೆಲ್ಲ ಪ್ರೀತಿಸಿದವರನ್ನು ವ್ಯವಸ್ಥೆಯ ಕಬಂಧ ಬಾಹುಗಳನ್ನು ಮೀರಿ ಪಡೆದುಕೊಳ್ಳುವ ಮೂಲಕ ಜೀವನವನ್ನು ಸುಖಮಯವಾಗಿಸಿಕೊಂಡವರು. ಸಮಾಜ ಹೇರುವ ವಿವಾಹವೆಂಬ ವಿಧಿಯನ್ನು, ಪ್ರೀತಿಸಿದವರನ್ನು ಪಡೆದುಕೊಳ್ಳುವ ಮೂಲಕ ಸಾರ್ಥಕಗೊಳಿಸಿಕೊಳ್ಳಬಹುದೆಂಬುದನ್ನು ಎತ್ತಿಹಿಡಿದವರು, ಬಹುಶಃ ಗೌರಮ್ಮನವರ ಇಚ್ಛೆಯೂ ಆಶಯವೂ ಇದೆಯಾಗಿದೆ ಎಂದೆನಿಸುತ್ತದೆ. ಏಕೆಂದರೆ ವಿವಾಹವನ್ನು ಸಂಪೂರ್ಣವಾಗಿ ತೊಡೆದುಹಾಕಲು ಅಸಾಧ್ಯವಾದುದರಿಂದ ಅದನ್ನು ಉತ್ತಮಗೊಳಿಸಿಕೊಳ್ಳಲು ಪ್ರೀತಿಯ ನೆರವನ್ನು ಪಡೆಯುವುದು ತಪ್ಪಲ್ಲ ಎಂಬ ತೀರ್ಮಾನಕ್ಕೆ ಬರುತ್ತಾರೆ.

ಗೌರಮ್ಮನವರನ್ನು ಹೆಚ್ಚು ಕಾಡಿರುವ ಸಂಗತಿಯ ವಿವಾಹದೊಂದಿಗೆ ಬೆಸೆದುಕೊಂಡಿರುವ 'ವರದಕ್ಷಿಣೆ'ಯಾಗಿದೆ. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದೇಶಕ್ಕೆ ತೆರಳುವ ಯುವಕರು ತಮ್ಮ ಓದಿಗಾಗಿ ವರದಕ್ಷಿಣೆಯನ್ನು ಬಯಸುವಂಥದ್ದು, ಇಲ್ಲವೆ ತಂದೆತಾಯಿಗಳು ಅವರು ಸಂಪ್ರದಾಯದ ವಿರುದ್ಧವಾಗಿ ಬೇರೆ ಯಾರೂ ವಿದೇಶೀಯರನ್ನು ಮದುವೆಯಾಗಬಾರದೆಂಬ ಮುಂದಾಲೋಚನೆಯಿಂದಲೇ ಮದುವೆಗಳನ್ನು ಮಾಡುತ್ತಿದ್ದರು. ಈ ಎರಡು ಮನೋಭಾವಗಳು ಹೇಗೆ ಹೆಣ್ಣಿನ ಬದುಕನ್ನು ಅವಳ

ಕನಸುಗಳನ್ನು ನಿರ್ನಾಮ ಮಾಡುತ್ತಿತ್ತು ಎಂಬ ಸತ್ಯಸಂಗತಿಯನ್ನು '. . .ಯಾರು', 'ಆಹುತಿ', 'ಒಂದು ಚಿತ್ರ', 'ನನ್ನ ಮದುವೆ' ಎಂಬ ಕತೆಗಳಲ್ಲಿ ಮಂಥನಕ್ಕೊಳಪಡಿಸಿದ್ದಾರೆ.

'ಒಂದು ಚಿತ್ರ' ಕಥೆಯ ರೋಹಿಣಿ ತನ್ನ ವಿವಾಹವನ್ನು ಕುರಿತು ಅತ್ತೆಗೆ ಬರೆದ ಪತ್ರವನ್ನು ಗಮನಿಸಿದರೆ, ಭಾರತೀಯ ಸಮಾಜದ ವಿವಾಹ ಕಲ್ಪನೆ ಹೆಚ್ಚು ಸ್ಪಷ್ಟಗೊಳ್ಳುತ್ತದೆ.

> "ಅತ್ತೆ, ನನಗೆ ಮದುವೆಯಾಯ್ತು. ನನ್ನನ್ನು ಮದುವೆಯಾದಾತ ಹಣವಂತರ ಒಬ್ಬನೇ ಮಗನಂತೆ, ಬರುವ ವಾರ ಮುಂದಿನ ಓದಿಗಾಗಿ ಯೂರೋಪಿಗೆ ಹೋಗಲಿರುವನಂತೆ. ಹಾಗೆ ಹೋದಾಗ ಯಾರಾದರೂ ಯೂರೋಪಿಯನ್ ರಮಣಿಯರ ಮೋಹಪಾಶಕ್ಕೆಲ್ಲಾದರೂ ಬಿದ್ದುಬಿಟ್ಟರೆ – ಎಂಬ ಭಯದಿಂದ ಹೋಗುವ ಮೊದಲೇ ಮದುವೆ ಮಾಡಿಬಿಡಬೇಕೆಂದು ಅವನ ತಂದೆಯ ಹಠವಂತೆ. ಮದುವೆಯಾಗದೆ ಹೋಗಲುಬಿಡುವುದಿಲ್ಲವೆಂದು ಅವನೂ ಒಪ್ಪಿದನಂತೆ. ನನಗೆ ರೂಪ ಸೌಂದರ್ಯಗಳಿವೆಯಂತೆ. ನನ್ನ ರೂಪವು ತಮ್ಮ ಮಗನನ್ನು ಕಾಪಾಡಬಲ್ಲುದೆಂಬ ಕಾರಣ ಅವನ ತಂದೆಗೆ. –ನಮ್ಮ ತಂದೆಗೆ; ಹುಡುಗ ಸುರೂಪಿ, ವಿದ್ಯಾವಂತ, ಇದಕ್ಕೂ ಹೆಚ್ಚಿನದೆಂದರೆ ಅವನ ಯೂರೋಪು ಯಾತ್ರೆಯು ಮುಗಿಯದೆ ನಾನು ಅತ್ತೆಯ ಮನೆಗೆ ಹೋಗಬೇಕಾಗಿಲ್ಲ. ಇದರಿಂದ ನನ್ನೋದು ಸುಗಮವಾಗಿ ಸಾಗಬಹದು ಎಂಬ ಕಾರಣ; ಸರಿ ಮದುವೆಯಾಗಬೇಕಾದರೆ ಇದಕ್ಕಿಂತ ಹೆಚ್ಚಿನ ಕಾರಣಗಳೇಕೆ? ಹೌದು, ನನ್ನ ಮದುವೆಯಾಯ್ತು. ಆದರೆ ಯಾರನ್ನು ನಾನು ಮದುವೆಯಾಗಿದ್ದೆನೋ ಅವನು ಹೇಗಿರುವನೆಂದು ನೋಡುವ ಕುತೂಹಲ ಸಹ ನನಗಿಲ್ಲ. ನಾನು ನೋಡಲೂ ಇಲ್ಲ. ಬಹುಶಃ ಅವನಿಗೂ ಅದೇ ಭಾವ ಇರಬಹುದು. ನನ್ನ ಚಿಕ್ಕ ತಂಗಿ ಚಿತ್ರಾ ಹೇಳಿದಳು ಅವನೂ ನನ್ನ ಕಡೆ ಒಂದು ಸಾರಿ ಸಹ ತಿರುಗಿ ನೋಡಲಿಲ್ಲವಂತೆ. ಅಂತೂ ನನಗೆ ಮದುವೆಯಾಯ್ತು."[೨೧]

ಎಲ್ಲೋ ಒಂದು ಕಡೆ ನಮ್ಮ ಸಮಾಜದಲ್ಲಿ ವಿವಾಹಕ್ಕೆ ಒಳಪಡುವ ಗಂಡಿನ ದೌರ್ಬಲ್ಯಗಳನ್ನು ಹೆಣ್ಣಿನ ಸೌಂದರ್ಯ ಹಿಡಿತದಲ್ಲಿರಿಸಿಕೊಳ್ಳುತ್ತದೆ ಎಂಬ ಮೌಢ್ಯ ಮನೆ ಮಾಡಿದೆ. ಹಾಗಾಗಿ ಮದುವೆಯಾಗುವ ಹೆಣ್ಣು ದೈಹಿಕ ಸೌಂದರ್ಯವನ್ನು ಹೊಂದಿರಬೇಕು ಇಲ್ಲವೆ ಹಣವನ್ನು ಹೊಂದಿರಬೇಕಾಗಿದೆ. ಎರಡೂ ಇಲ್ಲದಿದ್ದರೆ ಮದುವೆಯಾಗುವ ವ್ಯಕ್ತಿ 'ಅವಳ ಭಾಗ್ಯ'ದ 'ಪಾರು'ವಿಗೆ ಸಿಕ್ಕಂತಹ ರೋಗಿಯಾಗಿರುತ್ತಾನೆ.

ವಿದೇಶಕ್ಕೆ ತೆರಳುವ ವ್ಯಕ್ತಿಗಳನ್ನು ವಿವಾಹ ಮಾಡಿಕೊಂಡ ಹೆಣ್ಣುಮಕ್ಕಳ ಜೀವನವಂತೂ ಉಳಿದ ಹೆಣ್ಣುಗಳ ಬದುಕಿಗಿಂತ ತೀರಾ ಭಿನ್ನವಾದದ್ದು. ಏಕೆಂದರೆ ಹೆಚ್ಚು ಓದಿನಿಂದ ಪಡೆದುಕೊಂಡ ನಾಗರಿಕತೆಯಿಂದಾಗಿ ವ್ಯಕ್ತಿ ತನ್ನ ಭಾವನೆಗಳಿಗೆ ಸರಿಹೊಂದುವ ಹೆಣ್ಣನ್ನು ಪುನಃ ಮದುವೆಯಾಗಲು ಬಯಸುತ್ತಾನೆ. ಹಿಂದೆ ವರದಕ್ಷಿಣೆಗಾಗಿ ಮದುವೆಯಾದ ಹೆಣ್ಣು ಅವನಿಗೆ ಬೇಡದವಳಾಗುತ್ತಾಳೆ. ಹೀಗೆ ಬೇಡವಾದ ಹೆಣ್ಣು ಅನುಭವಿಸುವ ಯಾತನೆಗಳ ಚಿತ್ರಣ. . . ". . ಯಾರು" ಎಂಬ ಕಥೆಯಲ್ಲಿದೆ. ಇಂಗ್ಲೆಂಡಿಗೆ ಹೋಗುವ ಮುಂಚೆ ಹೆಂಡತಿಯನ್ನು ಕಾಣಲು ಬಂದವನು ಪಾಪನ ಕರೆದು,

"ಇಂಗ್ಲೆಂಡಿಗೆ ಹೋಗುವ ಸಲುವಾಗಿಯೇ ನಿನ್ನನ್ನು ಮದುವೆ ಆದೆ. ಇಲ್ಲದಿದ್ದರೆ ಯಾರು ಮದುವೆಯಾಗುತ್ತಿದ್ದರು ನಿನ್ನ'[೬]

ಎಂದು ನುಡಿದು ಅವಳ ಜೀವನದ ಆಶಾಗೋಪುರವನ್ನು ನಾಶಮಾಡಿದ್ದು ಅಲ್ಲದೆ, ಇಂಗ್ಲೆಂಡಿನಿಂದ ಮರಳಿದ ನಂತರ ಮತ್ತೊಬ್ಬಳನ್ನು ಮದುವೆಯಾಗುತ್ತಾನೆ. ಗಂಡನ ನಿರೀಕ್ಷೆಯಲ್ಲಿದ್ದ ಪಾಪಳನ್ನು, ಗಂಡನಿಂದ ಬೇಡವಾದ ಪಾಪಳನ್ನು ಜನರ ಹೀನದೃಷ್ಟಿ ಟೀಕೆಗೆ ಗುರಿಮಾಡಿತು.

"ಕಾರಣವಿರಲಿ ಇಲ್ಲದಿರಲಿ – ನಮ್ಮ ಸಮಾಜದಲ್ಲಿ ಪತಿಯಿಂದ ತಿರಸ್ಕೃತೆಯಾದ ಪತ್ನಿ ಎಂದರೆ ಎಲ್ಲರಿಗೂ ಸಂಶಯ. ಸಮಾಜದ ಕ್ರೂರ ನಾಲಿಗೆ ಪಾಪನನ್ನು ಟೀಕಿಸದಿರಲಿಲ್ಲ."[೭]

ಎಂದು ಅವಳಣ್ಣ ಹೇಳುವ ಮಾತು ಕಥೆಯಲ್ಲಿ ಮೂಡಿಬಂದಿದೆ. ಗಂಡು ಏನೇ ತಪ್ಪು ಮಾಡಲಿ ಅದನ್ನು ಒಪ್ಪಿಕೊಳ್ಳುವ ಸಮಾಜ ಹೆಣ್ಣಿನ ಜೀವನದ ಬಗೆಗೆ ತಳೆಯುವ ನಿಷ್ಠುರ ಧೋರಣೆ ಮನಸ್ಸಿಗೆ ಹಿಂಸೆಯನ್ನುಂಟುಮಾಡುತ್ತದೆ.

ಪ್ರಾಣಿಗಳಿಗಿಂತ ಮನುಷ್ಯರ ಕ್ರೌರ್ಯ ತೀವ್ರವಾದದ್ದು ಎಂಬುದನ್ನು ಮನದಟ್ಟು ಮಾಡಿಕೊಡುವಂತೆ ಈ ಕಥೆಯ ಅಂತ್ಯವಿದೆ. ಗಂಡನಿಂದ ತಿರಸ್ಕೃತೆಯಾದ ಪಾಪ ಸಾಯದೆ ಬದುಕಲು ನಿರ್ಧರಿಸಿ ತನ್ನ ಸಂಗೀತವನ್ನೇ ಜೀವನದ ಆಧಾರವಾಗಿ ಮಾಡಿಕೊಂಡು ಸಿನಿಮಾ ನಟಿಯಾದಾಗ ಇಡೀ ವ್ಯವಸ್ಥೆ ಅವಳನ್ನು ಕ್ರೂರವಾಗಿ ನೋಡುತ್ತದೆ.

"ವಸಂತ, ಜನರ ದೃಷ್ಟಿಯಲ್ಲಿ ಮೊದಲೇ ಪತಿಯಿಂದ ಪರಿತ್ಯಕ್ತೆಯಾಗಿದ್ದ ಪಾಪ. ಈಗ ಸಿನಿಮಾ ನಟಿ ! ಸಿನಿಮಾ ನಟಿ ! ನಮ್ಮವರಿಗೆ ಪತಿತರು, ಚರಿತ್ರಹೀನರು ಎನ್ನುವುದಕ್ಕೆ ಇದಕ್ಕಿಂತಲೂ ಹೆಚ್ಚಿಗಿನ್ನೇನು ಬೇಕು ವಸಂತ?"[೮]

ಎಂದು ಪಾಪಳ ಅಣ್ಣ ಮಹೇಶ ತನ್ನ ಸ್ನೇಹಿತನಿಗೆ ಕಾಗದದ ಮೂಲಕ ನೋವನ್ನು ತೋಡಿಕೊಳ್ಳುತ್ತಾನೆ. ಮನೆಯ ಚೌಕಟ್ಟಿನಿಂದ ಹೊರಬಂದು ಬದುಕನ್ನು ಸಾಗಿಸಲು ಪ್ರಯತ್ನಿಸುವ ಹೆಣ್ಣುಗಳನ್ನು ಅನುಮಾನದ ದೃಷ್ಟಿಯಿಂದ ನೋಡುವ ಸಮಾಜ ಅವಳು ಪವಿತ್ರವಾಗಿ ಉಳಿದಿರಲಾರಳು ಎಂಬ ನಿಲುವಿನಿಂದಲೇ ಹೆಣ್ಣನ್ನು ಕಾಣುತ್ತದೆ ಎಂಬ ಕಹಿಸತ್ಯವನ್ನು ಗೌರಮ್ಮ ಈ ಕಥೆಯ ಮೂಲಕ ಅನಾವರಣಗೊಳಿಸಿದ್ದಾರೆ. ಆದರೆ ಆಧುನಿಕ ಕಾಲದ ದುರಂತವೆಂದರೆ ಸಿನಿಮಾ ನಟಿಯರೆಲ್ಲ ಪತಿತೆಯರಲ್ಲ ಎಂಬ ವಿಚಾರವನ್ನು ಸಮಾಜಕ್ಕೆ ಅರಿವು ಮೂಡಿಸಿದ ಕ್ಷೇತ್ರ ಇಂದು ಅವಕಾಶಗಳನ್ನು ನೀಡುವ ನೆಪದಲ್ಲಿ ಹೆಣ್ಣು ಪತಿತೆಯಾದರೆ ಮಾತ್ರ ಈ ಕ್ಷೇತ್ರದಲ್ಲಿ ಉಳಿಯಲು ಸಾಧ್ಯವೆಂಬಂತಹ ಅನಿವಾರ್ಯತೆಯನ್ನು ಸೃಷ್ಟಿಸಿದೆ. ಎಷ್ಟೋ ಹೆಣ್ಣುಗಳು ಪಾವಿತ್ರಕ್ಕಿಂತ ಬದುಕು ಮುಖ್ಯವೆಂಬಂತೆ, ತಮ್ಮ ಸುಖ ಸಂತೋಷಗಳು ಮುಖ್ಯವೆಂಬಂತೆ ಪತಿತೆಯಾಗುತ್ತಿದ್ದಾರೆ. ಇದರ ಮತ್ತೊಂದು ಆಯಾಮವೆಂದರೆ ಸಮಾಜವು ಇದನ್ನು ಒಪ್ಪಿಕೊಂಡಿರುವುದು.

ಓದಿಗಾಗಿ ವಿದೇಶಕ್ಕೆ ತೆರಳಿ ಇಲ್ಲಿನ ಹೆಂಡತಿಯನ್ನು ಸಂಪೂರ್ಣವಾಗಿ ಮರೆತು, ತಮ್ಮ ಕಲ್ಪನೆಯ ಉತ್ತಮ ಜೀವನವನ್ನು ಕಂಡುಕೊಳ್ಳುವ ಪುರುಷರ ಬಗ್ಗೆ ವ್ಯಂಗ್ಯವಾಗಿ ವಿಡಂಬಿಸಿದ ದಿಟ್ಟ ಮಹಿಳೆ ಗೌರಮ್ಮನವರೊಬ್ಬರೇ ಎನಿಸುತ್ತದೆ. ಇವರನ್ನು ಬಿಟ್ಟರೆ ಶಾಂತಿನಾಥ ದೇಸಾಯಿಯವರ 'ಓಂ ಣಮೋ'ದಲ್ಲಿ ಕ್ವಚಿತ್ತಾಗಿ ಅದರ ವಿಚಾರ ಬರುತ್ತದೆ. ಆಡ್ಯಂನ ತಂದೆ ವಿದೇಶಕ್ಕೆ ತೆರಳುವ ಮೊದಲು ವಿವಾಹವಾದ ಇಲ್ಲಿಯ ಹೆಂಡತಿಯನ್ನು ಮರೆತು ವಿದೇಶದಲ್ಲೇ ಆ್ಯಡಂನ ತಾಯಿಯನ್ನು ಮದುವೆಯಾಗಿ ಸುಖದಿಂದಿರುತ್ತಾನೆ. ಇಲ್ಲಿ ಆಕೆ ಗಂಡನಿದ್ದೂ ಸಂಸಾರ ಸುಖವನ್ನು ಕಾಣದವಳಾಗಿ ಕೊನೆಗೆ ಸನ್ಯಾಸವನ್ನು ಪಡೆಯುತ್ತಾಳೆ. ತಂದೆ-ತಾಯಿಯರು ತೆಗೆದುಕೊಳ್ಳುವ ಅವೈಚಾರಿಕ ನಿರ್ಧಾರಗಳು ಎಷ್ಟೋ ಹೆಣ್ಣುಗಳ ದುರಂತತೆಗೆ ಕಾರಣವಾಗಿರುವುದನ್ನು ನಾವು ಕಾಣಬಹುದು.

ತಮ್ಮ ಜೀವನದ ಗುರಿಯೇ ವಿದೇಶಕ್ಕೆ ತೆರಳಿ ಉನ್ನತ ವ್ಯಾಸಂಗ ಮಾಡುವುದು ಎಂಬ ಮಹದಾಸೆಯನ್ನು ಹೊತ್ತ ಯುವಕರು ವರದಕ್ಷಿಣೆಯ ಆಸೆಗೆ ಬಲಿಯಾಗುವ ಮೂಲಕ ವಿವಾಹದಂತಹ ಪ್ರಮುಖ ವಿಚಾರದಲ್ಲಿ ಎಂತಹ ತಪ್ಪು ನಿರ್ಧಾರಗಳನ್ನು ತೆಗೆದುಕೊಂಡು ತಮ್ಮ ಹಾಗೂ ಅನ್ಯರ ನಾಶಕ್ಕೆ ಕಾರಣರಾಗುತ್ತಾರೆ ಎಂಬುದನ್ನು "ಆಹುತಿ" ಹಾಗೂ 'ನನ್ನ ಮದುವೆ' ಎಂಬ ಕಥೆಗಳಲ್ಲಿ ಗೌರಮ್ಮನವರು ವಿಚಾರಕ್ಕೆ ಒಳಗುಮಾಡಿದ್ದಾರೆ.

'ಆಹುತಿ' ಕಥೆಯಲ್ಲಿನ ನಾಯಕ ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರ್ ಆಗಬೇಕೆಂದು ಕನಸ್ಸೊತ್ತವನು. ಹೀಗಾಗಿ ಶ್ರೀಮಂತರ ಮನೆಯ ಹೆಣ್ಣನ್ನೇ ಬಯಸುತ್ತಾನೆ. ತಂದೆ ತಾಯಿ ನೋಡಿದ ಬಡವರ ಮನೆಯ

ಹೆಣ್ಣನ್ನು ಮದುವೆಯಾಗಲು ನಿರಾಕರಿಸುತ್ತಾನೆ. ಸೀತೆ ಹಾಗೂ ಶಾಂತಿಯರಿಗೆ ಮನೆಪಾಠ ಹೇಳಿಕೊಡಲು ಪ್ರಾರಂಭಿಸಿದ ಈತ ಬಡವಳಾದ ಶಾಂತಿಯನ್ನು ಬಹಳವಾಗಿ ಮೆಚ್ಚಿಕೊಂಡಿರುತ್ತಾನೆ. ಆದರೆ ಅವಳು ಸಾಯುವವರೆಗೆ ತಾನು ನಿರಾಕರಿಸಿದ ಹೆಣ್ಣು ಇವೆಳೆಂಬುದನ್ನು ಅರಿಯದಾಗುತ್ತಾನೆ. ಶಾಂತಿ ಸಾಯುವ ಮೊದಲು ಸೀತೆಗೆ ಬರೆದ ಕಾಗದದಲ್ಲಿ,

"ಅಣ್ಣ ನನ್ನ ಮದುವೆ ನಿಶ್ಚಯ ಮಾಡಿದ್ದಾರೆ, ಅಣ್ಣನಿಗಿಂತಲೂ ವಯಸ್ಸಾದ ವರ. ಮೂರನೆಯ ಮದುವೆಗೆ ನಾನು ವಧು. ನಾಲ್ಕು ಜನ ಮೊಮ್ಮಕ್ಕಳು ವರನಿಗಿರುವಂತೆ. ವರದಕ್ಷಿಣೆಯನ್ನು ಕೊಡಲು ಶಕ್ತಿಯಿಲ್ಲದುದಕ್ಕಾಗಿ ನನಗೆ ಮೊದಲು ನಿಶ್ಚಿತವಾದ ವರನು ನನ್ನನ್ನು ಮದುವೆಯಾಗಲು ಒಪ್ಪುವುದಿಲ್ಲವಂತೆ. ಸೀತಾ ಆ ಮುದುಕನ ಮಡದಿಯಾಗಿ ಸತ್ತ ಹೆಣದಂತೆ ಜೀವನವನ್ನು ಕಳೆಯುವುದಕ್ಕಿಂತ ನನಗೆ ಸಾವೇ ಲೇಸೆಂದು ತೋರುವುದು. ಲೇಸಾದ ಕಾರ್ಯವನ್ನೇಕೆ ಮಾಡಬಾರದು? ಆತ್ಮಹತ್ಯೆಯು ಪಾಪವೆಂದು ಜನರೆನ್ನುವರು. ಮುದುಕನ ಕೊರಳಿಗೆ ಚಿಕ್ಕ ಬಾಲಿಕೆಯನ್ನು ಕಟ್ಟುವುದು ಪುಣ್ಯವಾದರೆ ನನಗಾ ಪುಣ್ಯಕ್ಕಿಂತಲೂ ಆತ್ಮಹತ್ಯೆಯ ಪಾಪವೇ ಲೇಸೆಂದು ತೋರುವುದು"[೯]

ಹೀಗೆ ಶಾಂತಿಯನ್ನು ವರದಕ್ಷಿಣೆಯ ಪಿಡುಗು ಬಲಿತೆಗೆದುಕೊಂಡ ನಂತರ ಕಥಾನಾಯಕನ ಮನಸ್ಸು ಪಶ್ಚಾತ್ತಾಪ ಪಡುತ್ತದೆ. ಆದರೆ ಪಶ್ಚಾತ್ತಾಪದಿಂದ, ಪಾಪದ ಪರಿಹಾರವಾಗುತ್ತದೆಯೇ? ಮರಣಿಸಿದ ಶಾಂತಿ ಮರಳುತ್ತಾಳೆಯೇ?

ಬಡಕುಟುಂಬದಲ್ಲಿ ಜನಿಸಿ ಹೆಚ್ಚಿನ ಓದಿಗಾಗಿ ವಿದೇಶಕ್ಕೆ ಹಾರುವ ಕನಸ್ಸನ್ನು ಹೊತ್ತ ರಾಮುವಿನ ಜೀವನವೇ

'ನನ್ನ ಮದುವೆ' ಎಂಬ ಕಥೆಯ ಕಥಾವಸ್ತು. ಹಣವೇ ಮುಖ್ಯವೆಂದು ಶ್ರೀಮಂತರ ಮಗಳನ್ನು ಮದುವೆಯಾಗಲು ಬಯಸಿದ ರಾಮು ಹುಡುಗಿಯನ್ನು ನೋಡುವುದನ್ನು ನಿರಾಕರಿಸುತ್ತಾನೆ. ಮನೆಯವರೆಲ್ಲ ಕೇಳಿದಾಗ,

"ಹಣವನ್ನು ಮದುವೆಯಾಗುವ ನನಗೆ ಹುಡುಗಿನ ನೋಡಿ ಮಾಡಬೇಕಾದುದೇನು"[೧೦]

ಎಂದು ಸುಮ್ಮನಾಗುತ್ತಾನೆ. ಕೊನೆಗೆ ಮದುವೆಯ ಮಂಟಪದಲ್ಲಿ ತನ್ನ ಹೆಂಡತಿ ಶಾರಿ ಕುರುಡಿಯೆಂಬ ಸತ್ಯ ಗೊತ್ತಾದಾಗ ದುಃಖಿತನಾದರೂ ತಾನು ಬಯಸಿದ ವರದಕ್ಷಿಣೆಯ ಪಾಪಕ್ಕೆ ಪ್ರಾಯಶ್ಚಿತ್ತವಿದೆಂದು ಅಂದುಕೊಳ್ಳುತ್ತಾನೆ.

ಒಟ್ಟಾರೆ ಭಾರತೀಯ ವಿವಾಹದ ಚೌಕಟ್ಟು ನಿಂತಿರುವುದು ಹೆಣ್ಣು-ಗಂಡಿನ ಸಂತೋಷ ಬದುಕಿನ ಅಭೀಪ್ಸೆಯ ಆಧಾರದ ಮೇಲಲ್ಲ, ತಂದೆ-ತಾಯಿಯರ ಇಷ್ಟಾನುಸಾರ, ವರದಕ್ಷಿಣೆ ಹಾಗೂ ಹೆಣ್ಣಿನ ದೈಹಿಕ ಸೌಂದರ್ಯದ ಆಧಾರದ ಮೇಲೆ ಎಂಬುದು ನಿರ್ವಿವಾದಿತವಾದ ಸತ್ಯವಾಗಿದೆ. ಇದನ್ನು ಒಪ್ಪಿಯೂ ಸಹ ಗೌರಮ್ಮನವರು 'ವಿವಾಹ'ದ ಚೌಕಟ್ಟಿನಲ್ಲಿ ಸುಧಾರಣೆ ತರುವ ಮೂಲಕ ಅದರ ಮೂಲಸ್ವರೂಪವನ್ನು ಬದಲಿಸಬಹುದೆಂಬ ಆಶಯವನ್ನು ಹೊಂದಿದ್ದಾರೆ. ಅದಕ್ಕಾಗಿ ಯುವಜನತೆ ಪ್ರಯತ್ನಿಸಬೇಕೆಂಬ ಒಲವಿನಿಂದಲೆ 'ಆಹುತಿ' ಹಾಗೂ 'ನನ್ನ ಮದುವೆ' ಯಂತಹ ಕಥಾನಾಯಕರಲ್ಲಿ ಮನಃಪರಿವರ್ತನೆಯನ್ನು ತಂದಿದ್ದಾರೆ. ಅಷ್ಟೇ ಅಲ್ಲ ವಿವಾಹದ ಚೌಕಟ್ಟಿನಲ್ಲಿ ಪ್ರೀತಿಯ ಪ್ರವೇಶ ಮಾಡುವ ಮೂಲಕ ಅದಕ್ಕೊಂದು ಮೌಲ್ಯ ತಂದುಕೊಡಬಹುದೆಂಬ ವಿಚಾರದ ಸಲುವಾಗಿ 'ಕೌಸಲ್ಯಾನಂದನ' ಹಾಗೂ 'ಪ್ರಾಯಶ್ಚಿತ್ತ' ಕಥೆಗಳಲ್ಲಿ ವಿವಾಹಕ್ಕೆ ಪ್ರೀತಿಯ ಅಗತ್ಯವಿರುವುದನ್ನು ಮನಗಾಣಿಸಿದ್ದಾರೆ. ಒಟ್ಟಾರೆಯಾಗಿ ಸಾಂಪ್ರದಾಯಿಕ ವಿವಾಹದ ಚೌಕಟ್ಟಿನಲ್ಲಿ ಪರಿವರ್ತನೆಯ, ಸುಧಾರಣೆಯ ಅಗತ್ಯವಿರುವುದನ್ನು ಗೌರಮ್ಮನವರು ಕಂಡುಕೊಂಡಿರುವುದು ಬಹು ಮಹತ್ತ್ವದ ವಿಚಾರವಾಗಿದೆ.

## ಅಡಿಟಿಪ್ಪಣಿ

೧. ಸಿಮೋನ್ ದ ಬೊವಾ–'ದ ಸೆಕೆಂಡ್ ಸೆಕ್ಸ್' (ಒಂದು ಕನ್ನಡ ಓದು), ಡಾ. ಎಚ್.ಎಚ್. ಶ್ರೀಮತಿ, ಪುಟ–೮೮

೨. ಸಿಮೋನ್ ದ ಬೊವಾ–'ದ ಸೆಕೆಂಡ್ ಸೆಕ್ಸ್' (ಒಂದು ಕನ್ನಡ ಓದು), ಡಾ. ಎಚ್.ಎಚ್. ಶ್ರೀಮತಿ, ಪುಟ–೪೩೭

೩. 'ವಿನಯ' ಅಂಬಿಕಾತನಯದತ್ತರ ಆಯ್ದ ಕವನಸಂಕಲನ, ಸಂ. ವಾಮನ ಬೇಂದ್ರೆ, ಪುಟ–೭೮

೪. 'ವಿನಯ' ಅಂಬಿಕಾತನಯದತ್ತರ ಆಯ್ದ ಕವನಸಂಕಲನ, ಸಂ. ವಾಮನ ಬೇಂದ್ರೆ, ಪುಟ–೩೦

೫. 'ಒಂದು ಚಿತ್ರ' – 'ಜೀವನ ಪ್ರೀತಿ' – ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೫೦

೬. '. . . ಯಾರು' – 'ಜೀವನ ಪ್ರೀತಿ' – ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪು–೯೯

೭. '. . . ಯಾರು' – 'ಜೀವನ ಪ್ರೀತಿ' – ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪು–೧೦೦

೮. '. . . ಯಾರು' – 'ಜೀವನ ಪ್ರೀತಿ' – ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪು–೧೦೪

೯. 'ಆಹುತಿ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೪೫

೧೦. 'ನನ್ನ ಮದುವೆ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೯೦

## ೭. ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಸಮೂಹ ಮಾಧ್ಯಮಗಳಾದ ಪತ್ರ ಹಾಗೂ ಪತ್ರಿಕೆಗಳ ಪಾತ್ರ

ಜಗತ್ತನ್ನು ಕ್ಷಿಪ್ರಗತಿಯಲ್ಲಿ ಬದಲಾಯಿಸಿದ ಮಾಧ್ಯಮಗಳು ಕಾಗದ ಹಾಗೂ ಮುದ್ರಣ. ಕಾಗದ ಪತ್ರರೂಪದಲ್ಲಿ ಸಂದೇಶವಾಹಕವಾಗಿ ಕೆಲಸ ಮಾಡುವ ಮೂಲಕ ಜಗತ್ತನ್ನು ಕಿರಿದಾಗಿಸುವತ್ತ ನಡೆಯಿತು. ಇವತ್ತು ಅಂತರ್‌ಜಾಲ ಅದನ್ನು ಸಾಧ್ಯವಾಗಿಸಿದೆ. ಏನೇ ಆದರೂ ಕಾಗದ ಬರುವುದಕ್ಕಿಂತ ಹಿಂದಿನ ಜಗತ್ತು ತಾಳೆಗರಿಗಳನ್ನು, ಬಟ್ಟೆಯನ್ನು ತನ್ನ ರಾಜ್ಯಾಡಳಿತದ ಸಂದೇಶಕ್ಕಾಗಿ, ಪರಸ್ಪರ ವ್ಯವಹಾರಕ್ಕಾಗಿ, ಕಾವ್ಯರಚನೆಗಾಗಿ ಬಳಸಿಕೊಳ್ಳುತ್ತಿತ್ತು. ಜನಸಾಮಾನ್ಯರ ಜೀವನದಿಂದ ಇವೆಲ್ಲ ದೂರವೇ ಉಳಿದಿತ್ತು. ಬ್ರಿಟಿಷರ ಕಾರಣದಿಂದಾಗಿ ಭಾರತವನ್ನು ಪ್ರವೇಶಿಸಿದ ಕಾಗದ ಹಾಗೂ ಮುದ್ರಣಗಳು ಉಲ್ಲೇಖನಾರ್ಹ ಬದಲಾವಣೆಯನ್ನು ಜನಸಾಮಾನ್ಯರಲ್ಲಿ ತಂದಿತು. ಶಿಕ್ಷಣ ಹೆಚ್ಚೆಚ್ಚು ಪ್ರಸಾರಗೊಳ್ಳಲು, ದೇಶದ ಅಭಿವೃದ್ಧಿಗಾಗಿ ಕಂಡುಕೊಂಡ ಸಂಶೋಧನೆಗಳನ್ನು ತಿಳಿಸಲು, ಸುವ್ಯವಸ್ಥಿತ ಆಡಳಿತಕ್ಕೆ ಎಲ್ಲದಕ್ಕೂ ಕಾಗದ ನೆರವಾಯಿತು. ಕಾಗದವಿಲ್ಲದ ಆಧುನಿಕ ಬದುಕನ್ನು ಊಹಿಸಲು ಸಾಧ್ಯವಾಗದಷ್ಟು ತನ್ನ ಛಾಪನ್ನು ಹೊಂದಿದೆ.

ಕಾಗದದ ಅತ್ಯಂತ ಮೌಲ್ಯಯುತ ಬಳಕೆಯಾಗಿ ಪತ್ರಿಕೆ ಜಗತ್ತಿನಲ್ಲಿ ರೂಪು ತಾಳಿತು. ಜನರಲ್ಲಿ ಜಾಗೃತಿಯನ್ನು ಅರಿವನ್ನು ಮೂಡಿಸುವ ಹಾಗೂ ಮೌಲ್ಯಯುತ ಸುಂದರ ಸಮಾಜದ ಕನಸ್ಸನ್ನು ಹೊತ್ತ ಪತ್ರಿಕೆ ಅನ್ಯಾಯಗಳನ್ನು ಖಂಡಿಸುತ್ತದೆ. ಜಗತ್ತಿನಲ್ಲಿ ನಡೆದಿರುವ ಎಲ್ಲಾ ಪ್ರಮುಖ ಚಳವಳಿಗಳ ಹಿಂದೆ ಪತ್ರಿಕೆಯ ಪಾತ್ರವಿದೆ. ಫ್ರಾನ್ಸಿನ ಕೈಗಾರಿಕಾ ಕ್ರಾಂತಿಯ ಹಿಂದೆ ಕಾಗದದ ಪಾತ್ರವಿದೆ. ಜಗತ್ತಿನ ಎಷ್ಟೋ ಪ್ರಮುಖ ವ್ಯಕ್ತಿಗಳು ಪತ್ರಿಕೆಯ ಮಹತ್ವವನ್ನರಿತು ಗೌರವಿಸುತ್ತಿದ್ದರು. ಸ್ವಾತಂತ್ರ್ಯ ಚಳವಳಿಯ ರೂವಾರಿಗಳಾಗಿದ್ದ ಗಾಂಧೀಜಿಯವರು 'ಯಂಗ್ ಇಂಡಿಯಾ' ದಂತಹ ಪತ್ರಿಕೆಯ ಸಂಪಾದಕರಾಗಿದ್ದರು. ಅಂಬೇಡ್ಕರ್ ಸಹ 'ಹರಿಜನ್' ಹಾಗೂ 'ಬಹಿಷ್ಕೃತ ಭಾರತ' ಎಂಬ ಪತ್ರಿಕೆಗಳನ್ನು ನಡೆಸುತ್ತಿದ್ದರು. ಸ್ವಾತಂತ್ರ್ಯಪೂರ್ವದ ಪತ್ರಿಕೆಗಳು ಪ್ರತಿಯೊಬ್ಬ ಭಾರತೀಯನಲ್ಲೂ ರಾಷ್ಟ್ರಪ್ರೇಮದ ಕಿಚ್ಚನ್ನು ಹೊತ್ತಿಸಲು, ತ್ಯಾಗ ಬಲಿದಾನಗಳಂತಹ ಮೌಲ್ಯಗಳನ್ನು ಬೆಳೆಸಲು, ಜಾತಿಪದ್ಧತಿಯಂತಹ ಅನಿಷ್ಟಪದ್ಧತಿಯನ್ನು ತೊಡೆದು ಹಾಕಲು ಜನರನ್ನು ಪ್ರೇರೇಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಅಷ್ಟೇ ಅಲ್ಲ ದೇಶದ ಪ್ರಾಚೀನ ಸಾಹಿತ್ಯವನ್ನು, ಚರಿತ್ರೆಯನ್ನು ಕಟ್ಟಿಕೊಳ್ಳುವಲ್ಲಿ ಪತ್ರಿಕೆಯ ಪಾತ್ರ ಗಮನಾರ್ಹವಾದುದು.

ಸ್ವಸ್ಥ ಸಮಾಜದ ಹೊಣೆಯನ್ನು ಹೊತ್ತಿರುವ ಪತ್ರಿಕೆಯನ್ನಾಗಲೀ, ಜನರ ನೋವು-ನಲಿವುಗಳ ಆಪ್ತಮಿತ್ರನಾಗಿ ಕೆಲಸ ಮಾಡುತ್ತಿರುವ ಪತ್ರಗಳನ್ನಾಗಲಿ ಸಾಹಿತ್ಯದಲ್ಲಿ ಬಳಸಿಕೊಂಡ ಲೇಖಕರು ಕಡಿಮೆ. ನವೋದಯದಲ್ಲಿ ಮಾಸ್ತಿ, ಹಳಕಟ್ಟಿ, ಕಲ್ಯಾಣಮ್ಮ ಹಾಗೂ ತಿರುಮಲಾಂಬರವರನ್ನು ಒಳಗೊಂಡಂತೆ ಸಾಕಷ್ಟು ಜನ ಪ್ರಮುಖ ಲೇಖಕರು ಪತ್ರಿಕೆಗಳನ್ನು ನಡೆಸುತ್ತಿದ್ದರು. ಆದರೆ ಅದರ ಹೊಣೆಯನ್ನು, ಸಾಮಾಜಿಕ ಜವಾಬ್ದಾರಿಯನ್ನು ಸಾಹಿತ್ಯದ ಮೂಲಕ ಪಡಿಮೂಡಿಸಿದವರು ಗೌರಮ್ಮನವರೊಬ್ಬರೇ ಎನಿಸುತ್ತದೆ. ಏಕೆಂದರೆ ಮಾಸ್ತಿಯವರಲ್ಲಿ ಪತ್ರಗಳ ಪ್ರಸ್ತಾವವೇ ಅಪರೂಪ. ಇನ್ನು ಪತ್ರಿಕೆಗಳು ಇಲ್ಲವೇ ಇಲ್ಲ. ಕುವೆಂಪು ಸಹ ತಮ್ಮ ಎರಡು ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು' ಹಾಗೂ 'ಕಾನೂರು ಹೆಗ್ಗಡತಿ'ಗಳಲ್ಲಿ ಇಬ್ಬರು ಗೌಡರುಗಳ ನಡುವೆ ಗುತ್ತಿಯ ಮೂಲಕ ಪತ್ರ ರವಾನೆಯಾಗುತ್ತದೆ. ಕಾರಂತರಲ್ಲೋ 'ಅಳಿದ ಮೇಲೆ' ಎನ್ನುವ ಕಾದಂಬರಿಯಲ್ಲಿ ಪತ್ರ ಹಾಗೂ ದಿನಚರಿಗಳ ಪ್ರಸ್ತಾಪವಿದೆ. ಇವರುಗಳನ್ನು ಬಿಟ್ಟರೆ ಪತ್ರವನ್ನು ಹೆಚ್ಚು ತಮ್ಮ ಕಥೆಗಳಲ್ಲಿ ದುಡಿಸಿಕೊಂಡವರು 'ಆನಂದ' ರೊಬ್ಬರೇ. ಅವರನ್ನು ಬಿಟ್ಟರೆ ನವೋದಯ ಸಂದರ್ಭದಲ್ಲಿ ಪತ್ರ ಹಾಗೂ ಪತ್ರಿಕೆಗಳೆರಡನ್ನು ಬಳಸಿಕೊಂಡ ಲೇಖಕಿ ಕೊಡಗಿನ ಗೌರಮ್ಮ.

ಗೌರಮ್ಮನವರ ಕಥೆಗಳಲ್ಲಿ ಪತ್ರಗಳು ಕೇವಲ ವಾಹಕಗಳಲ್ಲ. ಅದು ಹೆಣ್ಣಿನ ತೊಳಲಾಟ, ತೊಯ್ದಾಟಗಳನ್ನು ಹಂಚಿಕೊಳ್ಳುವ ಪರಮ ಸ್ನೇಹಿತೆ. ಪುರುಷಕೇಂದ್ರಿತ ಮೌಲ್ಯವ್ಯವಸ್ಥೆಯ ತಾಕಲಾಟಗಳಿಂದ ಹೆಣ್ಣು ಅನುಭವಿಸುತ್ತಿರುವ ಯಾತನೆಗಳ ಹೊರಹಾಕುವಿಕೆಯ ಮಾಧ್ಯಮ. ಎಷ್ಟೋ ಜನರಿಗೆ ತಪ್ಪನ್ನು ಅರಿವು ಮಾಡಿಕೊಡುವ ಮೂಲಕ ಅವರುಗಳ ಪಶ್ಚಾತ್ತಾಪ, ಪ್ರಾಯಶ್ಚಿತ್ತಗಳಿಗೆ ನೆರವು ನೀಡುತ್ತಿರುವುದು ಪತ್ರಗಳೇ. ಸ್ತ್ರೀಜಗತ್ತಿನ ಭಾವನಾಲಹರಿಗಳು ಹರಿದಿರುವುದು ಪತ್ರಗಳಲ್ಲೇ. ಪತ್ರಗಳನ್ನು ಬಿಟ್ಟರೆ ಗೌರಮ್ಮ ಹೆಣ್ಣಿನ ಶೋಷಣೆಯ ಅನಾವರಣ ಮಾಡಲು ಬಳಸಿಕೊಂಡಿರುವ ಮತ್ತೊಂದು ಮಾಧ್ಯಮ ಪತ್ರಿಕೆ. ವ್ಯವಸ್ಥೆಯ ಕ್ರೌರ್ಯಕ್ಕೆ ತುತ್ತಾಗುವ ಹೆಣ್ಣಿನ ದುರಂತದ ಹೊಣೆಯನ್ನು ಸಮಾಜ ಹೊರಬೇಕಾಗಿರುವ ಅಗತ್ಯವನ್ನು ಪತ್ರಿಕೆಗಳಲ್ಲಿ ಹೆಣ್ಣಿನ ಶೋಷಣೆಯನ್ನು ಪ್ರಕಟಿಸುವ ಮೂಲಕ ಗೌರಮ್ಮ ತೋರಿಸಿಕೊಟ್ಟಿದ್ದಾರೆ.

ಆದರೆ ಇವತ್ತಿಗೂ ಹೆಣ್ಣಿನ ಮೇಲಿನ ದೌರ್ಜನ್ಯಗಳಾದ ಅತ್ಯಾಚಾರ, ಕೊಲೆ, ಆ್ಯಸಿಡ್‌ದಾಳಿಗಳಂತಹ ಸಂಗತಿಯನ್ನು ಪತ್ರಿಕೆ ಪ್ರಕಟಿಸಿದರೂ ಅದು ಮೊದಲ ಪುಟದಲ್ಲಿಲ್ಲ. ಮೂರು--ನಾಲ್ಕನೆಯ ಪುಟಗಳ ಒಂದು ಬದಿಯಲ್ಲಿ. ಸಮಾಜವು ಸಹ ಶೋಷಿತ ಹೆಣ್ಣುಮಕ್ಕಳ ಬಗ್ಗೆ ಸಹಾನುಭೂತಿ ತೋರಿಸುತ್ತಿದೆಯೇ ಹೊರತು ಶೋಷಕನನ್ನು ಶಿಕ್ಷಿಸುತ್ತಿಲ್ಲ. ಶೋಷಣೆಯನ್ನು ತಡೆಯುತ್ತಿಲ್ಲ. ಇಂತಹ

ಸಂಗತಿಗಳನ್ನು ಗಮನಿಸಿದರೆ ಅಕ್ಷರಲೋಕಕ್ಕೆ ಮೊದಲು ತೆರೆದುಕೊಂಡ ಲೇಖಕಿಗೆ ಸಾಧ್ಯವಾದ ಚಿಂತನೆ ಅನಂತರ ಇಷ್ಟು ವರ್ಷಗಳಲ್ಲಿ ಹೆಚ್ಚೆಚ್ಚು ವಿದ್ಯಾವಂತರೂ, ನಾಗರೀಕರೂ ಆಗುತ್ತಿರುವ ಜನಕ್ಕೆ ಏಕೆ ಸಾಧ್ಯವಾಗುತ್ತಿಲ್ಲ? ಮಾನವ ಜಗತ್ತಿನ ಆಧಾರಸ್ಥಂಭಗಳಲ್ಲಿ ಒಬ್ಬಳಾದ ಹೆಣ್ಣಿನ ಶೋಷಣೆ ಯಾಕೆ ಇನ್ನೂ ನಿಂತಿಲ್ಲ? ಅಥವಾ ಯಾಕೆ ಯಾರೂ ಅದಕ್ಕೆ ಪ್ರಾಮುಖ್ಯತೆ ನೀಡುತ್ತಿಲ್ಲ? ಎಂಬ ಪ್ರಶ್ನೆಗಳು ಏಳುತ್ತವೆ.

ಗೌರಮ್ಮನವರ ಸ್ತ್ರೀ ಅಸ್ತಿತ್ವದ ಹುಡುಕಾಟದ ನೆಲೆಯಿರುವುದು ಅವರು ಬಳಸಿಕೊಂಡಿರುವ ಕಥನತಂತ್ರವಾದ ಪತ್ರಗಳಲ್ಲಿ. ಹೆಣ್ಣು ತನ್ನೆಲ್ಲಾ ಅಂತರಾಳದ ನೋವುಗಳನ್ನು, ಮನಸ್ಸಿನ ಹೊಯ್ದಾಟಗಳನ್ನು ಬಿಚ್ಚುಮನಸ್ಸಿನಿಂದ ತೆರೆದಿಟ್ಟರುವುದು ಪತ್ರಗಳಲ್ಲಿ. ವ್ಯವಸ್ಥೆಯ ಶೋಷಣೆಯ ವಿರುದ್ಧ ಪ್ರತಿಭಟನೆಯ ಧ್ವನಿಯೆತ್ತಲಾಗದ ಹೆಣ್ಣು ತನ್ನ ಸೀಮಿತತೆಯಲ್ಲೇ ಅಭಿವ್ಯಕ್ತಿಗೆ ಕಂಡುಕೊಂಡ ಸಮರ್ಥ ಮಾಧ್ಯಮ ಪತ್ರ. ಗೌರಮ್ಮನವರ ಕಥೆಗಳಾದ 'ನಾಲ್ಕು ಘಟನೆಗಳು', 'ಅಪರಾಧಿ ಯಾರು', 'ಮನುವಿನ ರಾಣಿ', 'ಸುಳ್ಳುಸ್ವಪ್ನ' ದಂತಹ ಕತೆಗಳು ನಿದರ್ಶನಗಳಾಗಿವೆ.

'ನಾಲ್ಕು ಘಟನೆಗಳು' ಕಥೆಯಲ್ಲಿ ರಾಮು ಎಂಬಾತ ತನ್ನ ಸ್ನೇಹಿತೆ ಸೀತೆಗೆ ಬರೆದ ನಾಲ್ಕು ಕಾಗದಗಳಿವೆ. ಅದರಲ್ಲಿ ಒಂದು ಕಾಗದ ತುಂಬಾ ಮಹತ್ವದ ವಿಚಾರವನ್ನೊಳಗೊಂಡಿದೆ. ಅನಾಥ ವಿಧವೆಯನ್ನು ಜಗಳವಾಡಿ ಮಗುವಿನೊಡನೆ ಮಧ್ಯರಾತ್ರಿಯಲ್ಲಿ ಅವಳತ್ತೆ ಹೊರಹಾಕಿದ ದೃಶ್ಯವನ್ನು ಕಂಡ ರಾಮು,

"ಭಾರತರಮಣಿಯರಿಗೆ ಆರ್ಥಿಕ ಸ್ವತಂತ್ರತೆ ಇಲ್ಲದೆ ಎಷ್ಟೊಂದು ದುಷ್ಪರಿಣಾಮಗಳಾಗುತ್ತಿರುವವೆಂದು ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿಯೂ ನನಗೆ ಸಂತೋಷವಾಗುವುದು"

ಎಂದು ಬರೆದಿದ್ದ. ಆತ ಹೇಳುವುದು ನಿಜ ಎಷ್ಟೋ ಸಂದರ್ಭಗಳಲ್ಲಿ ಆರ್ಥಿಕಸುಭದ್ರತೆಯಿಲ್ಲದ ಕಾರಣ ಮಹಿಳೆಯರು ಆತ್ಮಹತ್ಯೆಗೆ ಶರಣಾಗುವ ಸನ್ನಿವೇಶಗಳು ನಿರ್ಮಾಣವಾಗುತ್ತವೆ. 'ವಾಣಿಯ ಸಮಸ್ಯೆ' ಯ ಇಂದುವಿಗೆ ಆರ್ಥಿಕ ಭದ್ರತೆಯಿದ್ದ ಕಾರಣದಿಂದಾಗಿ ಅವಳು ಇತರರ ಹಂಗಿಗೆ ಒಳಪಡದೆ ಬದುಕುತ್ತಾಳೆ. ಆದರೆ 'ಅಪರಾಧಿ ಯಾರು'ವಿನ ಪಾರ್ವತಿಯಾಗಲೀ, 'ಒಂದು ಪುಟ್ಟ ಚಿತ್ರ'ದ ಶಾಂತೆಯಾಗಲೀ ಆರ್ಥಿಕ ಸದೃಢತೆ ಇಲ್ಲದ ಕಾರಣದಿಂದಾಗಿ ನಾಗೇಶರಾಯರಂತಹವರ, ರಘುವಿನಂತಹ ನಯವಂಚಕರನ್ನು ಆಶ್ರಯಿಸಿ ದುರಂತವನ್ನಪ್ಪುತ್ತಾರೆ. 'ಅಪರಾದಿ ಯಾರು' ಎಂಬ ಕಥೆಯ ಪಾರ್ವತಿ ಮಗುವಿನ ಆರೈಕೆಗಾಗಿ ತನ್ನ ಜಾತಿಯವರಾದ ನಾಗೇಶರಾಯರ ಮನೆಯಲ್ಲಿ ಆಶ್ರಯ ಪಡೆದು ಅವನಿಂದ

ವಂಚಿತಳಾಗಿ, ಬಹಿಷ್ಕಾರಕ್ಕೊಳಗಾಗಿ ಮನೆಯಿಂದ ಹೊರದೂಡಲ್ಪಡುತ್ತಾಳೆ. ಇಂತಹ ಅನಾಥೆಯು ಜೀವನಕ್ಕಾಗಿ ಮುಸ್ಲಿಂ ಧರ್ಮವನ್ನು ಆಶ್ರಯಿಸಿದಾಗ ಈ ಘಟನೆಯನ್ನು ಕುರಿತು ಹಿಂದೂಧರ್ಮಿಯಳೊಬ್ಬಳು ಸೀತಮ್ಮನವರಿಗೆ ಬರೆದ ಕಾಗದ ಗಮನಿಸಿ;

"ಆ ಪಾರ್ವತಿ ನೋಡಿ – ಬೊಂಬೆಯ ಹಾಗೆ ಅಲಂಕಾರ ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ – ಆ ಪಂಡಿತರ ಮಗಳು, ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ. ನೋಡಿ! ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಲೆಗೆ ಕಳುಹಿಸಿದಾಗಲೇ ನನಗೆ ಗೊತ್ತಿತ್ತು. ಅವಳು ಹೀಗಾಗುವಳೆಂದು ! ಇದು ಬೇರೆ ತಮಾಷೆ ನೋಡಿ, ಪಕ್ಕದ ಮನೆ ಲಕ್ಷ್ಮಿ ಇದ್ದಾಳಲ್ಲ. ಈ ಜಾತಿಗೇಡಿಯ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದವಳು. ಅವಳೆನ್ನುತ್ತಾಳೆ ಕೇಳಿ :– 'ಸೇರದೆ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವುದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ, ಜಾರಿಯ ದಾರಿ ತೋರಿಸಿದ ನಿಮಗೆ ಅವಳೇನಾದರೇನು ?' ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ ! ಜಾತಿಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳಬೇಕಾಗಿತ್ತಂತೆ ! ನೋಡಿದಿರಾ ಹೇಗಿದೆ ಎಂತ !!"[೨] ಎಂದು ಪತ್ರ ಬರೆಯುತ್ತಾಳೆ. ಪುರುಷವ್ಯವಸ್ಥೆ ನಿರ್ಮಿಸುವ ಮೌಲ್ಯಗಳನ್ನು ತಮ್ಮವೆಂಬಂತೆ ಅಪ್ರಜ್ಞಾಪೂರ್ವಕವಾಗಿ ಒಪ್ಪಿ ನಡೆಯುತ್ತಿರುವ ಹಳೆಯ ತಲೆಮಾರಿನವರ ಎದುರಿಗೆ ಆಧುನಿಕ ಶಿಕ್ಷಣದಿಂದಾಗಿ ಮಹಿಳೆಯ ಮೇಲೆ ನಡೆಯುತ್ತಿರುವ ವ್ಯವಸ್ಥಿತ ದೌರ್ಜನ್ಯಗಳನ್ನು ಕಂಡುಕೊಂಡಿರುವ ಲಕ್ಷ್ಮಿಯಂತವರ ನಡುವೆ ತಿಕ್ಕಾಟವಿದ್ದರೂ, ಹೊಸಪ್ರಜ್ಞೆಯ ಉದಯದ ಸೂಚನೆಯಿದೆ.

'ಸುಳ್ಳುಸ್ವಪ್ನ' ದಂತಹ ಕಥೆಯಲ್ಲಿನ ಸರಸಿ ಪ್ರೀತಿಸಿದವನನ್ನು ಮದುವೆಯಾಗಲಾರದೆ ವ್ಯವಸ್ಥೆಯ ಒತ್ತಡಕ್ಕೆ ಒಳಗಾಗಿ ಅನ್ಯರನ್ನು ಮದುವೆಯಾದರೂ ಪ್ರೇಮಿಯನ್ನು ಮರೆಯಲಾರದವಳಾಗಿ ಸಂಕಟ ಅನುಭವಿಸುತ್ತಾಳೆ. ಅವನಿಗೂ ಮದುವೆಯೆಂಬ ಸಂಗತಿ ತಿಳಿದಾಗ ಅವಳು ಬರೆಯುವ ಪತ್ರ ಗಮನಿಸಿ.

> "ನಾಳೆ ಅವನಿಗೆ ಮದುವೆಯಂತೆ ! ಆಗಲಿ. . .ನನಗೇನು? ನಾನೇಕೆ ಅಯ್ಯೋ ಅನ್ನಬೇಕು? ಮೂರು ವರುಷಗಳಿಂದಲೂ ಅವನಿಗೆ ಬೇಗ ಮದುವೆಯಾಗಲಿ ನನ್ನನ್ನವನು ಮರೆಯಲಿ ಎಂದು ಪ್ರಾರ್ಥಿಸುತ್ತಿದ್ದ ನಾನು ಇಂದೇಕೆ ಅವನ ಮದುವೆಯ ವರ್ತಮಾನ ಕೇಳಿ ದುಃಖಿತಳಾಗಬೇಕು? ನನಗಾಗಿ ಅವನೇಕೆ ಮದುವೆಯಾಗದಿರಬೇಕು? ನಾನು ಮನಸ್ಸನ್ನು ಎಷ್ಟಷ್ಟು ಕಾರಣಗಳನ್ನು ಕೇಳಿಕೊಂಡರೂ, ಹೃದಯಾಂತರಾಳದಿಂದ ಸಣ್ಣದನಿಯೊಂದು 'ಅಯ್ಯೊ' ಎನ್ನುವುದೇಕೆ?"[೩]

ಎಂದು ಕೊರಗುತ್ತಾಳೆ. ಪ್ರೀತಿಯನ್ನು ಮರೆಯಲಾಗದೆ, ಗಂಡನನ್ನು ಬಿಡಲಾರದೆ ಸದಾಕಾಲ ಕೊರಗುವ ಎಷ್ಟೋ ಹೆಣ್ಣುಗಳ ಹೊಯ್ದಾಟವಿದು. ನವ್ಯದ ರಾಜಲಕ್ಷ್ಮಿ ಎನ್. ರಾವ್ ಸಹ ತಮ್ಮ 'ಇಲ್ಲ ಇಲ್ಲ. . .' ಕಥೆಯಲ್ಲಿ ಇದೇ ಕಥಾವಸ್ತುವನ್ನು ಹೆಣೆದಿದ್ದಾರೆ. ಇಲ್ಲಿನ ಕಥಾನಾಯಕಿ ಪದ್ಮ ಹೋರಾಟಗಾರನಾದ ಪ್ರಭಾಕರನನ್ನು ಪ್ರೀತಿಸಿದರೂ ಮದುವೆಯಾಗಲು ಸಾಧ್ಯವಾಗದೆ ತಂದೆ ತಾಯಿ ಒಪ್ಪಿದ ಶಂಕರನನ್ನು ಮದುವೆಯಾಗುತ್ತಾಳೆ. ಒಲ್ಲದ ಮನಸ್ಸಿನಿಂದ ವ್ಯವಸ್ಥೆಯ ಚೌಕಟ್ಟಿಗೆ ಸಿಲುಕುವ ಇಂತಹ ಹೆಣ್ಣುಗಳು ಕೊನೆಯವರೆಗೂ ಅತೃಪ್ತರಾಗಿ ಉಳಿಯುವ ದುರಂತವೇ ಆಕೆ ಪರತಂತ್ರಳು ಎಂಬುದನ್ನು ಮನಗಾಣಿಸುತ್ತದೆ.

'ಪ್ರಾಯಶ್ಚಿತ್ತ' ಹಾಗೂ 'ಮನುವಿನ ರಾಣಿ' ಕಥೆಗಳಲ್ಲಿ ಪತ್ರವೆಂಬುದು ಪ್ರಾಯಶ್ಚಿತ್ತದ ವಾಹಕವಾಗಿ ಕೆಲಸ ಮಾಡಿರುವುದನ್ನು ಕಾಣಬಹುದು. ಪ್ರಾಯಶ್ಚಿತ್ತ ಕಥೆಯ ನಾಯಕನಾದ ಮೂರ್ತಿಯ ತಂದೆ ಅವನು ಮದುವೆಯಾಗಲು ಬಯಸಿದ ನಲಿನಿಯ ತಾಯಿಯ ಸಾವಿಗೆ ಕಾರಣನಾಗಿರುತ್ತಾನೆ. ಅಷ್ಟೇ ಅಲ್ಲ. ಮಗ ಅವಳನ್ನು ಮದುವೆಯಾಗಲು ಬಯಸಿದಾಗ ತಡೆಯಲು ಯತ್ನಿಸುತ್ತಾನೆ. ತಂದೆಯ ಮಾತನ್ನು ಮೀರಿ ಮೂರ್ತಿ ನಲಿನಿಯನ್ನು ವಿವಾಹವಾಗುತ್ತಾನೆ. ತಂದೆಗೊಂದು ಪತ್ರವನ್ನು ಬರೆಯುತ್ತಾನೆ. ಅದನ್ನು ಓದಿದ ತಂದೆ "ನನ್ನ ಪಾಪದ ಪ್ರಾಯಶ್ಚಿತ್ತವಿದು" ಎಂದು ನಿಟ್ಟುಸಿರು ಬಿಡುತ್ತಾನೆ.

ಇದೇ ರೀತಿ 'ಮನುವಿನ ರಾಣಿ' ಕಥೆಯಲ್ಲಿ ವೇಶ್ಯೆ ರಾಜಮ್ಮ ತನ್ನ ಮನುವಿಗೆ ಕೊನೆಗಾಲದಲ್ಲಿ ಚಿಕಿತ್ಸೆ ನೀಡಿದ ಡಾಕ್ಟರಿಗೆ ಒಂದು ಪತ್ರ ಬರೆಯುತ್ತಾಳೆ.

> "ಡಾಕ್ಟ್ರೇ ನನ್ನಂಥವಳ ಮೇಲೆ ಜನರಿಗೆ ಕರುಣೆ ಇರುವುದು ಅಪರೂಪ. ನನ್ನಂಥವರಿಗೆ ಕಷ್ಟಬಂದಾಗ ಸಹಾಯ ಮಾಡುವುದು ಸಹ ಮನುಷ್ಯಧರ್ಮಕ್ಕೆ ವಿರೋಧವೆಂದು ಭಾವಿಸುವವರೇ ಹೆಚ್ಚು. ಇಷ್ಟು ದಿನ, ಈಗ ನಾಲ್ಕು ವರ್ಷ ನಾನು ಯಾರಿಂದಲೂ ಸಹಾಯವನ್ನಾಗಲಿ, ಸಹಾನುಭೂತಿಯನ್ನಾಗಲಿ ಅಪೇಕ್ಷಿಸಿದವಳಲ್ಲ. ಮೊನ್ನೆ ಮನುವಿಗೆ ಒಂದೇ ಸಾರಿ ಜ್ವರ ಜೋರಾಯಿತು.. . . . . . . . . . . . . . . . . . . . . . . . . . . . . . . . . . . . . . . . . . . . . . . ನೀವು ಮನುವಿನ ಕೊನೆಗಾಲದಲ್ಲಿ ಮಾಡಿದ ಸಹಾಯ ಎಂದೂ ಮರೆಯುವಂತಿಲ್ಲ. ನನ್ನಂಥ ದರಿದ್ರ ಪ್ರಾಣಿ ನಿಮಗೆ ಯಾವ ಪ್ರತಿಫಲವನ್ನು ಕೊಡಬಲ್ಲುದು ? ದೇವರೇ ನಿಮಗೆ ಒಳ್ಳೆಯದನ್ನು ಮಾಡಬೇಕು."[೮]

ಎಂದು ಬರೆದಿರುತ್ತಾಳೆ. ಇದನ್ನು ಓದಿದ ಡಾಕ್ಟರು ಹಾಗೂ ಅವರ ಮಡದಿ ಪಾರ್ವತಿಯವರು ಇದುವರೆಗೂ ಅವರು ನಂಬಿದ್ದ ವೇಶ್ಯೆಯೆಂದರೆ ಹಲವು ಮನೆಗಳನ್ನು ನಾಶಮಾಡುವ ವಂಚಕಿಯರೆಂಬ ಹೀನಭಾವನೆ ದೂರವಾಗಿ ಮನು ಹಾಗೂ ರಾಜಮ್ಮರ ಅನ್ಯೋನ್ಯ ಸಂಬಂಧದ ಬಗ್ಗೆ ಗೌರವ ಉಂಟಾಗುತ್ತದೆ. ಈ ಕಥೆಗಳಲ್ಲಿ ಪತ್ರವೆಂಬುದು ಮನಃಪರಿವರ್ತನೆಗೆ ಸಾಕಾರಿಯಾಗಿದೆ.

ಪತ್ರಗಳಲ್ಲಿ ಹೆಣ್ಣಿನ ಹೃದಯಾಂತರಾಳದ ಹೊಯ್ದಾಟಗಳ ಅನಾವರಣ ಮಾಡಿದ ಗೌರಮ್ಮನವರು ಸಾಮಾಜಿಕ ಜವಾಬ್ದಾರಿಯ ಪತ್ರಿಕೆಯು ಹೇಗೆ ಹೆಣ್ಣನ್ನು ಆಳಲು ವ್ಯವಸ್ಥೆ ರೂಪಿಸಿದ ಕುತಂತ್ರಗಳಿಂದ ಸ್ತ್ರೀಜಗತ್ತು ಸಂಕಟಪಡುತ್ತಿದೆ ಎಂಬುದನ್ನು ಬೆಳಕಿಗೆ ತರಬೇಕಾಗಿರುವ ಅನಿವಾರ್ಯತೆಯನ್ನು ತಿಳಿಸಿಕೊಡುವ ಸಲುವಾಗಿ ತಮ್ಮ ಮೂರು ಕಥೆಗಳಲ್ಲಿ ಹೆಣ್ಣಿನ ದುರಂತವನ್ನು ತಿಳಿಸಲು ಪತ್ರಿಕೆಯನ್ನು ಬಳಸಿಕೊಂಡಿದ್ದಾರೆ. ಅವರ 'ಒಂದು ಪುಟ್ಟ ಚಿತ್ರ', 'ಅಪರಾಧಿ ಯಾರು' ಹಾಗೂ 'ಆಹುತಿ'ಗಳು ಈ ವಿಚಾರವನ್ನೊಳಗೊಂಡಿವೆ.

'ಒಂದು ಪುಟ್ಟ ಚಿತ್ರ' ದ ಶಾಂತಿ ರಘುವಿನಿಂದ ಮೋಸಕ್ಕೊಳಗಾಗಿ ಗರ್ಭಿಣಿಯಾದವಳು ಸಮಾಜದ ಕ್ರೂರದೃಷ್ಟಿಯನ್ನು ಎದುರಿಸಲಾಗದೆ ಅಣ್ಣನಿಗೆ ಪತ್ರ ಬರೆದಿಟ್ಟು ಸಾವಿಗೆ ಶರಣಾಗುತ್ತಾಳೆ. ಇವಳ ವಿಚಾರ ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ. ಅದು ಹೀಗಿದೆ.

"ಇಂದು ಇಲ್ಲಿಗೆ ನಾಲ್ಕು ಮೈಲು ದೂರದಲ್ಲಿರುವ ಕೆರೆಯಲ್ಲಿ ಒಂದು ಹೆಂಗಸಿನ ಶವವು ಸಿಕ್ಕಿತು. ಅವಳು ಗರ್ಭಿಣಿ. ಜನರಲ್ ಆಸ್ಪತ್ರೆಯಲ್ಲಿ ಅವಳ ಶವವನ್ನಿಟ್ಟಿದ್ದಾರೆ. ಅವಳು ಯಾರೆಂದು ಗೊತ್ತಿಲ್ಲ. ಯಾರಿಗಾದರೂ ಅವಳ ವಿಷಯ ತಿಳಿದಿದ್ದರೆ ದಯೆಮಾಡಿ ತಿಳಿಸಬೇಕೆಂದು ಕೋರುತ್ತೇವೆ"[೨೪]

ಶಾಂತಿಯ ಈ ಕಥೆ ಅವಳೊಬ್ಬಳದಲ್ಲ. ಎಷ್ಟೋ ಜನ ಅಮಾಯಕ ಹೆಣ್ಣುಮಕ್ಕಳ ಕಥೆ. ಗಂಡನನ್ನು, ತಂದೆತಾಯಿಗಳನ್ನು ಕಳೆದುಕೊಂಡು ಆರ್ಥಿಕ ನೆರವಿಲ್ಲದ ಎಷ್ಟೋ ವಿಧವೆಯರು ಕಾಮುಕರ ಆಸೆಗೆ ಬಲಿಯಾಗಿ ಸಮಾಜನ್ನು ಎದುರಿಸಿ ಬದುಕಲಾಗದೆ ದುರ್ಮರಣವನ್ನಪ್ಪುತ್ತಾರೆ. ಒಂದು ವೇಳೆ ಸಮಾಜವನ್ನು ಎದುರಿಸಿ ಬದುಕಲು ಪ್ರಯತ್ನಿಸಿದರೆ ಬಹಿಷ್ಕಾರವನ್ನಾಕುತ್ತಾರೆ. ಅದಕ್ಕೂ ಅಂಜದೆ ಮತಾಂತರಗೊಳ್ಳುವ ಹೆಣ್ಣುಗಳನ್ನು ಬೇರೆಯ ತಂತ್ರಗಳ ಮೂಲಕ ಹಿಂಸಿಸುತ್ತಾರೆ. 'ಅಪರಾಧಿ ಯಾರು' ಕಥೆಯ ಪಾರ್ವತಿಯ ಜೀವನ ಇದನ್ನು ವಿಚಾರಕ್ಕೆ ಗುರಿಮಾಡುತ್ತದೆ.

"ತಾರೀಖು ೮ರ ಸ್ಥಳೀಯ ಪತ್ರಿಕೆಯೊಂದರಲ್ಲಿ ಹೀಗಿತ್ತು : ಮೊನ್ನೆ ದಿನ ಹಿಂದೂ ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದುದು ಊರಿನ ಹಿಂದೂಗಳಿಗೆಲ್ಲಾ ಬಹಳ

ವಿಷಾದವನ್ನುಂಟು ಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು."[೬]

ಯಾರಿಂದ ಶೋಷಣೆ ನಡೆಯುತ್ತಿದೆಯೋ ಅವರೇ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿರುವ ಸಾಮಾಜಿಕ ದುರಂತದ ಬಗೆಗಿನ ವ್ಯಂಗ್ಯ ಗೌರಮ್ಮನವರ ಈ ಕಥೆಯಲ್ಲಿದೆ.

ವಿವಾಹದ ಒಂದು ಮುಖ ವಿಧವೆಯರ ಸಮಸ್ಯೆಯಾದರೆ ಮತ್ತೊಂದು ವರದಕ್ಷಿಣೆಯದು. ಹೆಣ್ಣುಮಕ್ಕಳ ವಿವಾಹಕ್ಕೆ ಅಡ್ಡಿಯಾಗಿರುವ ವರದಕ್ಷಿಣೆಯನ್ನು ನೀಡುವ ಸಾಮರ್ಥ್ಯವಿಲ್ಲದ ತಂದೆತಾಯಂದಿರು ತಮ್ಮ ಜವಾಬ್ದಾರಿಯನ್ನು, ಹೊರೆಯನ್ನು, ಭಾರವನ್ನು ಇಳಿಸಿಕೊಳ್ಳುವ ನೆಪದಲ್ಲಿ ವಿಧುರರಿಗೆ, ಮುದುಕರಿಗೆ ತಮ್ಮ ಹೆಣ್ಣುಮಕ್ಕಳನ್ನು ನೀಡಲು ಮುಂದಾಗುತ್ತಿದ್ದರು. ಇಂತಹ ವಿಧಿಗೆ ಒಳಪಡಬೇಕಾದ ಹೆಣ್ಣುಗಳು ಅನುಭವಿಸುವ ಯಾತನೆಗಳು, ಸಂಕಷ್ಟಗಳು ಅವರ್ಣನೀಯವಾದವುಗಳು. 'ಆಹುತಿ' ಕಥೆಯ ಶಾಂತಿ ತನ್ನ ಗೆಳತಿಗೆ ಬರೆಯುವ ಪತ್ರ ನೋಡಿ,

"ಅಣ್ಣ ನನ್ನ ಮದುವೆ ನಿಶ್ಚಯ ಮಾಡಿದ್ದಾರೆ. ಅಣ್ಣನಿಗಿಂತಲೂ ವಯಸ್ಸಾದ ವರ. ಮೂರನೆಯ ಮದುವೆಗೆ ನಾನು ವಧು. ನಾಲ್ಕು ಜನ ಮೊಮ್ಮಕ್ಕಳು ವರನಿಗಿರುವರಂತೆ, ವರದಕ್ಷಿಣೆಯನ್ನು ಕೊಡಲು ಶಕ್ತಿಯಿಲ್ಲದುದಕ್ಕಾಗಿ ನನಗೆ ಮೊದಲು ನಿಶ್ಚಿತವಾದ ವರನು ನನ್ನನ್ನು ಮದುವೆಯಾಗಲು ಒಪ್ಪುವುದಿಲ್ಲವಂತೆ, ಸೀತಾ, ಆ ಮುದುಕನ ಮಡದಿಯಾಗಿ ಸತ್ತ ಹೆಣದಂತೆ ಜೀವನವನ್ನು ಕಳೆಯುವುದಕ್ಕಿಂತಲೂ ನನಗೆ ಸಾವೇ ಲೇಸೆಂದು ತೋರುವುದು. ಲೇಸಾದ ಕಾರ್ಯವನ್ನೇಕೆ ಮಾಡಬಾರದು? ಆತ್ಮಹತ್ಯೆಯು ಪಾಪವೆಂದು ಜನರೆನ್ನುವರು, ಮುದುಕನ ಕೊರಳಿಗೆ ಚಿಕ್ಕ ಬಾಲಿಕೆಯನ್ನು ಕಟ್ಟುವುದು ಪುಣ್ಯವಾದರೆ ನನಗಾ ಪುಣ್ಯಕ್ಕಿಂತಲೂ ಆತ್ಮಹತ್ಯೆಯ ಪಾಪವೇ ಲೇಸೆಂದು ತೋರುವುದು. ನಿನಗೆ ಈ ಕಾಗದವು ತಲುಪುವಾಗ ನಿನ್ನ ನಿರ್ಭಾಗ್ಯ ಸಹೋದರಿಯು ಈ ಪ್ರಪಂಚದಿಂದ ಹೊರಟು ಹೋಗಿರುವಳು. ಆತ್ಮಹತ್ಯೆಯನ್ನು ಮಾಡಿಕೊಂಡ ಪಾಪಿಯೆಂದು ನೀನೊಬ್ಬಳಾದರೂ ಜರಿಯುವುದಿಲ್ಲವೆಂದು ನನಗೆ ಗೊತ್ತಿದೆ. ಕ್ಷಮಿಸು."[೭]

ಎಂದು ಬರೆದು ಆತ್ಮಹತ್ಯೆ ಮಾಡಿಕೊಂಡಿರುತ್ತಾಳೆ. ಅವಳ ಫೋಟೋದೊಂದಿಗೆ ಕೆಳಗಡೆ ವರದಕ್ಷಿಣೆ ಆಹುತಿಯೆಂಬ ವಿವರಣೆಯೊಂದಿಗೆ ಪತ್ರಿಕೆ ಶಾಂತಿಯ ವಿಚಾರವನ್ನು ಮುದ್ರಿಸಿರುತ್ತದೆ. ಸಂಪ್ರದಾಯದ

ಹೆಸರಿನಲ್ಲಿ ಭಾರತೀಯ ಸಮಾಜದಲ್ಲಿ ವಿವಾಹದಂತಹ ಸಂಕೋಲೆಗಳು ಬಲಿ ತೆಗೆದುಕೊಳ್ಳುತ್ತಿರುವ ಎಷ್ಟೋ ಹೆಣ್ಣುಗಳ ಪ್ರತಿನಿಧಿ ಈ ಶಾಂತಿ.

ಹೆಣ್ಣುಗಳ ಈ ರೀತಿಯ ಅಂತ್ಯಕ್ಕೆ ಕಾರಣರಾರು? ವರದಕ್ಷಿಣೆಯನ್ನು ಬಯಸುವ ಗಂಡುಗಳೇ? ವರದಕ್ಷಿಣೆಯನ್ನು ನೀಡಲಾಗದ ಅಸಹಾಯಕ ತಂದೆತಾಯಿಗಳೆ? ಅಥವಾ ಶಿಕ್ಷಣ ಹಾಗೂ ಆರ್ಥಿಕ ಕ್ಷೇತ್ರಗಳಿಂದ ದೂರವಿಟ್ಟಿರುವ ವ್ಯವಸ್ಥೆಯೇ? ಹೆಚ್ಚೆಚ್ಚು ಹೆಣ್ಣುಗಳ ಆತ್ಮಹತ್ಯೆಗಳು, ಶೋಷಣೆಗಳು ನಡೆಯುತ್ತಿದ್ದರೂ ಇವಕ್ಕೆ ಕಾರಣರಾದ ನಯವಂಚಕರನ್ನು ಶಿಕ್ಷಿಸಲಾಗದೆ ಕಾಪಾಡುತ್ತಿರುವ ಸಮಾಜವೇ? ಇವುಗಳ ಹಿಂದಿರುವ ಹುನ್ನಾರಗಳಾವುವು? ಎಂಬ ಪ್ರಶ್ನೆಗಳು ಏಳುತ್ತವೆ. ಇಂತಹ ಪ್ರಶ್ನೆಗಳನ್ನು ನವೋದಯದ ಕೊಡಗಿನ ಗೌರಮ್ಮ ತಮ್ಮ ಕಥೆಗಳಲ್ಲಿ ವಿಚಾರಕ್ಕೊಳಪಡಿಸಿರುವುದು ಬಹಳ ಮಹತ್ತ್ವದ ಸಂಗತಿಯಾಗಿದೆ.

## ಅಡಿಟಿಪ್ಪಣಿ

೧. 'ನಾಲ್ಕು ಘಟನೆಗಳು' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೫೪

೨. 'ಅಪರಾಧಿ ಯಾರು' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೭೧

೩. 'ಸುಳ್ಳುಸ್ವಪ್ನ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೮೯

೪. 'ಮನುಷಿನ ರಾಣಿ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೧೧–೧೧೨

೫. 'ಒಂದು ಪುಟ್ಟ ಚಿತ್ರ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೩೨

೬. 'ಅಪರಾಧಿ ಯಾರು' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೭೪

೭. 'ಆಹುತಿ' – 'ಜೀವನ ಪ್ರೀತಿ' ಕಥಾಸಂಕಲನ, ಸಂ. ಪ್ರೊ. ಕಾಳೇಗೌಡ ನಾಗವಾರ, ಪುಟ–೧೪೫

## ೮. ಸಮಾರೋಪ

ಕನ್ನಡ ನವೋದಯದ ಧೀಮಂತ ಪತ್ರಿಭೆಗಳಲ್ಲಿ ಒಬ್ಬರಾದ ಗೌರಮ್ಮನವರು ತಮ್ಮ ಕಥೆಗಳ ಮೂಲಕ ವಿಶಿಷ್ಟ ಛಾಪನ್ನು ಮೂಡಿಸಿದ ಲೇಖಕಿ. ಕಥಾವಸ್ತು ವಿಷಯದ ಆಯ್ಕೆಯಲ್ಲಿಯೇ ನಾವೀನ್ಯತೆ ಮೆರೆದಿರುವ ಈಕೆ ಅವುಗಳ ನಿರೂಪಣ ತಂತ್ರ ಹಾಗೂ ವಿಚಾರ ಮಂಥನದಿಂದಾಗಿ ಸಹೃದಯರ ಮನಸೂರೆಗೊಂಡಿದ್ದಾರೆ. ಅವರ ಕತೆಗಳು ಕೇವಲ ೨೧ ಮಾತ್ರವಾದರೂ ಅವುಗಳ ಮೌಲ್ಯಕ್ಕೆ ಬೆಲೆ ಕಟ್ಟಲು ಅಸಾಧ್ಯ

ಗೌರಮ್ಮನವರ ಒಂದೊಂದು ಕಥೆಗಳೂ ಸಮಾಜದ ವಿವಿಧ ಮುಖಗಳನ್ನು ನಮ್ಮ ಮುಂದೆ ತಂದಿರಿಸುತ್ತದೆ. ನಾವೆಲ್ಲ ಪವಿತ್ರ ವಿಧಿಯೆಂದೆ ನಂಬಿರುವ 'ವಿವಾಹ' ಹೇಗೆ ಎಷ್ಟೋ ಜನ ಅಮಾಯಕ ಹೆಣ್ಣುಮಕ್ಕಳ ಅನಂತ ಸಂಕಟಕ್ಕೆ ಮೂಲವಾಗಿದೆಯೆಂಬುದನ್ನು ತಮ್ಮ ಕಥೆಗಳಲ್ಲಿ ತೆರೆದಿಟ್ಟಿದ್ದಾರೆ. ತಂದೆ ತಾಯಿಗಳಿಗೆ ಹೆಣ್ಣುಮಕ್ಕಳ ಮದುವೆ ಮಾಡುವುದು ಹೊರೆಯನ್ನು, ಜವಾಬ್ದಾರಿಯನ್ನು ಕಳೆದುಕೊಳ್ಳುವ ಮಾರ್ಗವಾದರೆ, ಗಂಡಿನ ತಂದೆ ತಾಯಿಯರಿಗೆ ತಮ್ಮ ಮಕ್ಕಳು ಅನ್ಯಮಾರ್ಗಕ್ಕೆಳಸದಂತೆ ಕಟ್ಟಿಹಾಕುವ ಐಂದ್ರಿಕಜಾಲ. ಇನ್ನು ಗಂಡೋ ವರದಕ್ಷಿಣೆಗಾಗಿ ಇಲ್ಲವೆ ದೈಹಿಕ ಸುಖಕ್ಕಾಗಿ ಅಥವಾ ಎರಡನೆಯ ಮದುವೆಯಾದರೋ ಮೊದಲ ಹೆಂಡತಿಯ ಮಕ್ಕಳ ಲಾಲಪಾಲನೆಗಾಗಿ ಮದುವೆಯಾಗುತ್ತಾನೆ. ಆದರೆ ಇವರೆಲ್ಲರೂ ಬಲಿಪಶು ಮಾಡಲು ಹೊರಟಿರುವ ಹೆಣ್ಣಿನ ಆಸೆಗಳೇನು? ಕನಸುಗಳೇನು? ಎಂಬುದನ್ನು ವ್ಯವಸ್ಥೆ ಎಂದಾದರೂ ಅರಿಯಲು ಪ್ರಯತ್ನಿಸಿದೆಯೇ? ಉತ್ತರ ಬರೀ ಶೂನ್ಯ ಮಾತ್ರ.

ಗೌರಮ್ಮನವರ ಕಥೆಗಳ ಮತ್ತೊಂದು ಪ್ರಮುಖ ಕಥಾಹಂದರ 'ವಿಧವಾ ಸಮಸ್ಯೆ'. ವಿವಾಹ ಮಾತ್ರ ತಮ್ಮ ಜವಾಬ್ದಾರಿ, ವಿಧವೆಯರಾಗುವುದು ಅವರ ಹಣೆಬರಹ ಅದಕ್ಕಾಗಿ ಕೊರಗುವ ಅಗತ್ಯವಿಲ್ಲವೆಂಬ ಗೃಹೀತಗಳನ್ನಿಟ್ಟುಕೊಂಡಿರುವ ವ್ಯವಸ್ಥೆ ಆಕೆಗೆ ಕೆಂಪು ಸೀರೆ ಉಡಿಸಿ, ಅವಲಕ್ಕಿ ಮೆಲ್ಲಲು ನೀಡಿ, ಸೇವೆಯೇ ಪರಮ ಧರ್ಮವೆಂಬ ಕರ್ತವ್ಯವನ್ನು ಹೆಗಲಿಗೇರಿಸಿ ದುಡಿಸಿಕೊಳ್ಳುತ್ತದೆ. ಇಂತಹ ಕ್ರೂರವ್ಯವಸ್ಥೆಯನ್ನು ಪ್ರಶ್ನಿಸುವ ಗೌರಮ್ಮನವರು ವಿಧವೆಯರಿಗೆ ನೀಡಬೇಕಾಗಿರುವುದು ವಿದ್ಯೆ ಹಾಗೂ ಆರ್ಥಿಕ ಭದ್ರತೆಯೆಂಬ ಅಂಶಗಳನ್ನು ತಿಳಿಸಿಕೊಡುತ್ತಾರೆ. ಅಷ್ಟೇ ಅಲ್ಲ ಜೀವನವೆಂದರೇನೆಂದು? ತಿಳಿಯುವ ಮೊದಲೇ ಜೀವನ ಮುಗಿಯಿತೆಂದು ಅವಳನ್ನು ಜೀವಂತ ಶವವಾಗಿಸುವುದರ ಬದಲಾಗಿ ತಮ್ಮ ಜವಾಬ್ದಾರಿಯ ಹೊಣೆ ಹೊತ್ತು ಅವಳಿಗೆ ಜೀವನ ನೀಡಿ ಎಂಬ ವಿಚಾರವನ್ನು ತಮ್ಮ ಕಥೆಗಳ ಮೂಲಕ ಹೊರಗಿಟ್ಟಿದ್ದಾರೆ.

ಇದಲ್ಲದೆ ಪತ್ರಿಕೆಗಳು, ವ್ಯವಸ್ಥೆಯು ಹೆಣ್ಣಿನ ಮೇಲೆ ನಡೆಸುವ ಶೋಷಣೆಗಳನ್ನು, ದೌರ್ಜನ್ಯಗಳನ್ನು ಬಯಲಿಗೆಳೆಯುವ ಮೂಲಕ ಕ್ರೂರವ್ಯವಸ್ಥೆಯ ಮನಃಪರಿವರ್ತನೆಗೆ ಹಾಗೂ ಹೆಣ್ಣಿನ ಜಗತ್ತಿನಲ್ಲಿ ಎಚ್ಚರವನ್ನು ಮೂಡಿಸಲು ಹೇಗೆ ಸಹಕಾರಿಯಾಗಬೇಕೆಂದು ತಮ್ಮ ಕಥೆಗಳಲ್ಲಿ ತೋರಿಸಿಕೊಟ್ಟ ದಿಟ್ಟ ಮಹಿಳೆ ಗೌರಮ್ಮನವರು. ಬಹುಶಃ ಇಡೀ ಕನ್ನಡ ಸಾಹಿತ್ಯದಲ್ಲಿ ಪತ್ರಿಕೆಯೂ ನಿರ್ವಹಿಸಬೇಕಾಗಿರುವ ಸಾಮಾಜಿಕ ಹೊಣೆಯನ್ನು ತೋರಿಸಿಕೊಟ್ಟ ಏಕೈಕ ಮಹಿಳೆ ಗೌರಮ್ಮನವರು.

ಇಷ್ಟೆಲ್ಲಾ ಸ್ತ್ರೀ ಜಗತ್ತಿನ ನೋವು-ನಲಿವುಗಳಿಗೆ ಸ್ಪಂದಿಸಿರುವ ಗೌರಮ್ಮನವರ ವ್ಯಕ್ತಿತ್ವದ ವಿಶಿಷ್ಟತೆಯೆಂದರೆ ಅವರ ಜಾತ್ಯಾತೀತ ಮನೋಭಾವ. ಸ್ವಾತಂತ್ರ್ಯ ಬಂದ ಇಷ್ಟು ವರ್ಷಗಳಾದರೂ ಇನ್ನೂ ಸಾಧಿಸಲಾಗದೆ ಚಡಪಡಿಸುತ್ತಿರುವ ಜಾತ್ಯಾತೀತ ಪರಿಕಲ್ಪನೆಯನ್ನು ಸ್ವಾತಂತ್ರ್ಯಕ್ಕೂ ಪೂರ್ವದಲ್ಲಿ ಅತ್ಯಂತ ನಿಷ್ಠವಾಗಿ ಪಾಲಿಸಿದ ಗೌರಮ್ಮ ತಮ್ಮ ಕಥೆಗಳಲ್ಲೂ ಆ ವಿಚಾರವನ್ನು ವಿಶ್ಲೇಷಣೆಗೊಳಪಡಿಸಿದ್ದಾರೆ. ಅವರಿಗೆ ಯಾವತ್ತೂ ಬದುಕಿಗಿಂತ ಜಾತಿ-ಮತಗಳು ಮುಖ್ಯವೆಂದು ಅನಿಸಿರಲಿಲ್ಲ. ಆದ್ದರಿಂದಲೇ ಕಾಡ ಮೇಸ್ತ್ರಿ ತನ್ನ ಜೀವನದಲ್ಲಿ ಎರಡೆರಡು ಬಾರಿ ಮತಾಂತರಗೊಳ್ಳುವುದನ್ನು ಚಿತ್ರಿಸಲು ಗೌರಮ್ಮನವರಿಗೆ ಸಾಧ್ಯವಾಯಿತು.

ಒಟ್ಟಾರೆಯಾಗಿ ಹೇಳುವುದಾದರೆ ಕೊಡಗಿನ ಗೌರಮ್ಮನವರು ಕನ್ನಡ ಸಾಹಿತ್ಯದ ಶ್ರೀಮಂತಿಕೆಗೆ ಮೆರುಗು ನೀಡಿದ ಶ್ರೇಷ್ಠ ಲೇಖಕಿ ಎಂಬುದು ನಿರ್ವಿವಾದ ಸಂಗತಿಯಾಗಿದೆ. ಇದುವರೆಗಿನ ಕನ್ನಡ ಸಾಹಿತ್ಯ ವಿಮರ್ಶೆ ಆಕೆ 'ಮರೆಯಬಾರದ ಲೇಖಕಿ' ಎಂದಿತ್ತು. ಆದರೆ ಅವರ ಕಥೆಗಳನ್ನು ಓದಿದ ನಂತರ, 'ಮರೆಯಬಾರದ ಲೇಖಕಿ'ಯಷ್ಟೇ ಅಲ್ಲ, 'ಮರೆಯಲಾಗದ ಲೇಖಕಿ'ಯು ಹೌದು ಎನಿಸುತ್ತದೆ.

# ಗ್ರಂಥಸೂಚಿ

(ಅಕಾರಾದಿಯಾಗಿ)


೧. 'ಅವಳ ಕತೆಗಳು' – ಸಂ. ಡಾ॥ ಜಿ.ಎಸ್. ಅಮೂರ, ಪ್ರಿಸಂ ಬುಕ್ಸ್ ಪ್ರೈ. ಲಿ. ಬನಶಂಕರಿ, ಬೆಂಗಳೂರು

೨. 'ಉತ್ತರ – ದಕ್ಷಿಣ' – ರಾಮಮನೋಹರ ಲೋಹಿಯಾ ಬರಹಗಳು ಸಂಪುಟ ೨, ಸಂ. ನಟರಾಜ್ ಹುಳಿಯಾರ್ ಮತ್ತು ಪ್ರೊ. ಕಾಳೇಗೌಡ ನಾಗವಾರ, ಕರ್ನಾಟಕ ಸರ್ಕಾರ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩. 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' – ಸಂ. ಡಾ. ಎಚ್.ಎಚ್. ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. 'ಕಲ್ಯಾಣ ಸರಸ್ವತಿ' – ಸಂ. ಡಾ. ಬಿ.ಎನ್. ಸುಮಿತ್ರಾಬಾಯಿ, ಕರ್ನಾಟಕ ಲೇಖಕಿಯರ ಸಂಘ (ರಿ). ಚಾಮರಾಜಪೇಟೆ, ಬೆಂಗಳೂರು

೫. 'ಕನ್ನಡ ಲೇಖಕಿಯರ ನೆಲೆ–ಬೆಲೆ' ಬಿ.ಎಸ್. ವೆಂಕಟಲಕ್ಷ್ಮಿ, ಎನ್.ಟಿ. ಶ್ಯಾಂ ಪ್ರಕಾಶನ, ಇಂದಿರಾನಗರ, ಬೆಂಗಳೂರು

೬. 'ಕನ್ನಡ ಕಥನ ಸಾಹಿತ್ಯ – ಸಣ್ಣಕತೆ' – ಜಿ.ಎಸ್. ಅಮೂರ, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ, ಬೆಂಗಳೂರು

೭. 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ' 'ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ ಮಾಲೆ ೧ – ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೮. 'ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ'– ಡಾ. ಎನ್.ಕೆ. ಕೋದಂಡರಾಮ, ಗಾಯತ್ರಿ ಸ್ಮಾರಕ ಗ್ರಂಥಮಲೆ, ದಾರಿದೀಪ ವಿದ್ಯಾಸಂಸ್ಥೆಯ ಆವರಣ, ಬೋಗಾದಿ, ಮೈಸೂರು

೯. 'ಕಾನೂರು ಹೆಗ್ಗಡಿತಿ' – ಕುವೆಂಪು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು

೧೦. 'ಕೃತಿ ಸಂಸ್ಕೃತಿ' – ಎಂ.ಜಿ. ಕೃಷ್ಣಮೂರ್ತಿ, ಋಜುವಾತು ಪ್ರಕಾಶನ, ಮೈಸೂರು

೧೧. 'ಕೌದಿ' – (ಕವನ ಸಂಕಲನ) – ನಳಿನಿ ವಿಜಯಕುಮಾರ್, ಸಹೃದಯ ಪ್ರಕಾಶನ, ಕೃಷ್ಣರಾಜ ಪುರಂ, ಹಾಸನ

೧೨. 'ಗಾಂಧಿ ತತ್ತ್ವಚಿಂತನೆ' – ನೀಲತ್ತಹಳ್ಳಿ ಕಸ್ತೂರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. 'ಗ್ರಾಮಾಯಣ' – ರಾವ್ ಬಹದ್ದೂರ್, (ಸುವರ್ಣ ಸಾಹಿತ್ಯ ಗ್ರಂಥಮಾಲೆ) – ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೧೪. 'ಚೋಮನ ದುಡಿ' ಡಾ. ಶಿವರಾಮ ಕಾರಂತ, ಪ್ರಕಾಶಕರು–ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ರೈಲ್ವೆ ಪ್ಯಾರಲಲ್ ರೋಡ್, ಕುಮಾರ ಪಾರ್ಕ್ ಈಸ್ಟ್, ಬೆಂಗಳೂರು

೧೫. 'ಜೀವನ ಪ್ರೀತಿ' – ಕೊಡಗಿನ ಗೌರಮ್ಮ ಬರೆದ ಎಲ್ಲಾ ಕಥೆಗಳು, ಸಂ. ಪ್ರೊ. ಕಾಳೇಗೌಡ ನಾಗವಾರ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು

೧೬. 'ನನ್ನ ದೇವರು ಮತ್ತು ಇತರ ಕಥೆಗಳು' – ಕುವೆಂಪು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು

೧೭. 'ನಡೆದದ್ದೇ ದಾರಿ' – (ಸಮಗ್ರ ಕಥನ ಸಾಹಿತ್ಯ) – ವೀಣಾ ಶಾಂತೇಶ್ವರ, ಸುಂದರ ಪುಸ್ತಕ ಪ್ರಕಾಶನ, ಧಾರವಾಡ

೧೮. 'ಪ್ರಜ್ಞೆ ಮತ್ತು ಪರಿಸರ' – ಯು.ಅರ್. ಅನಂತಮೂರ್ತಿ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ಕರ್ನಾಟಕ

೧೯. 'ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ'–'ಲೇಖಕಿಯರ ಕಥಾಸಂಕಲನ'–ಸಂ. ವೀಣಾ ಶಾಂತೇಶ್ವರ, ಪ್ರಕಾಶನ, ಕರ್ನಾಟಕ ಸರ್ಕಾರ

೨೦. 'ಬರಹಗಾರ್ತಿಯ ಬದುಕು' – ಅನುಪಮಾ ನಿರಂಜನ, ಪ್ರಕಾಶಕರು ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು

೨೧. 'ಭಾರತೀಯ ಸ್ತ್ರೀವಾದ' – ಸಂ. ಎನ್. ಮನು ಚಕ್ರವರ್ತಿ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ಕರ್ನಾಟಕ

೨೨. 'ಮಲೆಗಳಲ್ಲಿ ಮದುಮಗಳು' – ಕುವೆಂಪು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು

೨೩. ಮರಳಿ ಮಣ್ಣಿಗೆ' – ಶಿವರಮ ಕಾರಂತ, ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ರೈಲ್ವೆ ಪ್ಯಾರಲಲ್ ರೋಡ್, ಕುಮಾರ ಪಾರ್ಕ್ ಈಸ್ಟ್, ಬೆಂಗಳೂರು

೨೪. 'ಮಹಿಳಾ ಸಾಹಿತ್ಯ ಸಮೀಕ್ಷೆ' – ಸಂ. ಆರ್ಯಾಬ ಪಟ್ಟಾಭಿ, ಕನ್ನಡ ಲೇಖಕಿಯರ ಸಂಘ, ಮೈಸೂರು

೨೫. 'ಮಹಿಳಾ ಅಧ್ಯಯನ' – ಸಂಚಿಕೆ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. 'ಮಹಿಳಾ ಚಳವಳಿ' – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ – ಡಾ. ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಕುವೆಂಪುನಗರ, ಮೈಸೂರು

೨೭. 'ಮಾಸ್ತಿ ಸಣ್ಣ ಕತೆಗಳು'– ಸಂಪುಟ ೨, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್, ಗವೀಪುರಂ, ಬೆಂಗಳೂರು

೨೮. 'ಮಾಸ್ತಿ ಸಣ್ಣ ಕತೆಗಳು'– ಸಂಪುಟ ೪, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್, ಗವೀಪುರಂ, ಬೆಂಗಳೂರು

೨೯. 'ವಿನಯ' – ಅಂಬಿಕಾತನಯದತ್ತರ ಆಯ್ದ ಕವನ ಸಂಕಲನ, ಸಂ. ವಾಮನ ಬೇಂದ್ರೆ, ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ

೩೦. 'ಶತಮಾನದ ಸಣ್ಣಕಥೆ' – ಸಂ. ಬೊಳುವಾರು ಮೊಹಮದ್ ಕುಂಞ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೩೧. 'ಶತಮಾನಗಳ ಸಣ್ಣಕಥೆಗಳ ಸಮೀಕ್ಷೆ'–ಕರೀಗೌಡ ಬೀಚನಹಳ್ಳಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

